# ಕರ್ನಾಟಕ
# ಪ್ರಾಗಿತಿಹಾಸ ಕಾಲದ ಕಲೆ

ಪ್ರಧಾನ ಸಂಪಾದಕರು

ಪಿ.ಆರ್. ತಿಪ್ಪೇಸ್ವಾಮಿ

ಲೇಖಕರು

ಅ. ಸುಂದರ

ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

KARNATAKA PRAGITIHASA KALADA KALE-A book on Karnataka Pre-Historic Art by **A. Sundara** and Published by K. Mukundan, Registrar, Karnataka Lalitakala Academy, Nrupathunga Road, Bangalore-560 002.

First Impression : 1994

Copies: 1000

**ಬೆಲೆ : 20–00**

**ಪ್ರಧಾನ ಸಂಪಾದಕರು:**

**ಶ್ರೀ ಪಿ.ಆರ್. ತಿಪ್ಪೇಸ್ವಾಮಿ**

**ಪ್ರಕಟಣಾ ಸಮಿತಿ:**

**ಶ್ರೀ ವಿ.ಟಿ. ಕಾಳೆ**

**ಶ್ರೀಮತಿ ಎಸ್. ಧನಲಕ್ಷ್ಮಿ**

**ಡಾ. ಬಿ.ಕೆ. ಹಿರೇಮಠ**

**ಶ್ರೀ ರಘುಪತಿಭಟ್**

**ಶ್ರೀ ವೈ. ಹೆಚ್. ಸೂಗೂರು**

---

**ಮುದ್ರಣ: ಬೃಂದಾವನ್ ಪ್ರಿಂಟರ್ಸ್, 12/13, ಲಾಲ್‌ಬಾಗ್ ಕೋಟೆ ರಸ್ತೆ, ಬೆಂಗಳೂರು–4**

# ಪ್ರಧಾನ ಸಂಪಾದಕರ ನುಡಿ

ಡಾ|| ಅ. ಸುಂದರ ಅವರು ಕರ್ನಾಟಕ 'ಪ್ರಾಗಿತಿಹಾಸ ಕಾಲದ ಕಲೆ' ಕುರಿತ ಒಂದು ಅಪರೂಪದ ಕೃತಿಯನ್ನು ನಮ್ಮ ಅಕಾಡೆಮಿ ಪ್ರಕಟಣೆಗೆ ನೀಡಿದ್ದಾರೆ. ಉತ್ತರ ಕರ್ನಾಟಕದ ಪ್ರಾಗಿತಿಹಾಸ ಕಾಲದ ಬಂಡೆ ಗವಿ ಚಿತ್ರಗಳ ಬಗ್ಗೆ ಸಂಶೋಧನೆ ನಡೆಸಿದ ಒಂದು ಕಿರುನೋಟವನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಶ್ರೀಯುತರು ಆ ಕಾಲದ ಕಲಾ ಪ್ರಕಾರಗಳ ಜೊತೆಗೆ ಗೀರು ಚಿತ್ರಗಳ ಮೇಲೆ ಹೊಸ ಬೆಳಕನ್ನು ಚೆಲ್ಲಿದ್ದಾರೆ. ಈ ಕೃತಿ ಚಿತ್ರಕಲಾಭ್ಯಾಸಿಗಳಿಗೆ, ಕಲಾವಿದರಿಗೆ, ಕಲಾಪ್ರೇಮಿಗಳಿಗೆ ಉಪಯುಕ್ತವಾದುದು ಎನ್ನಬಹುದಾಗಿದೆ.

ಡಾ|| ಸುಂದರ ಅವರು ತಾವು ನಡೆಸಿದ ಕ್ಷೇತ್ರಕಾರ್ಯ ಹಾಗೂ ಶೋಧನೆಗಳಲ್ಲಿ ವರ್ಣಚಿತ್ರ ಗವಿಗಳು ಹಾಗೂ ಬಯಲು ಬಂಡೆಯ ಚಿತ್ರಗಳನ್ನು ಹೊಂದಿರುವ ರಾಯದುರ್ಗ, ಬಾದಾಮಿ–ಐಹೊಳೆ, ಹಿರೆಬೆನಕಲ್, ಹಂಪೆ, ಬ್ರಹ್ಮಗಿರಿ, ಚಿತ್ರದುರ್ಗ ಪ್ರದೇಶಗಳ ವರ್ಣಚಿತ್ರ ಗವಿಗಳು, ಬಯಲು ಬಂಡೆಯ ಚಿತ್ರಗಳು ನಮ್ಮ ಹಿಂದಿನ ಕಲಾ ಕೇಂದ್ರ ಪ್ರದೇಶಗಳೆಂದು ನಿರ್ಧರಿಸಿದ್ದಾರೆ. ಇವೇ ಅಲ್ಲದೆ ಕುಪ್ಪುಗಲ್ಲು, ಮಲೆನಾಡು ಹಾಗೂ ಪಶ್ಚಿಮ ಕಡಲ ಪ್ರದೇಶದಲ್ಲೂ ಸಂಶೋಧನೆ ಆಗಬೇಕಾಗಿದೆ ಎಂದು ಸೂಚಿಸುತ್ತಾರೆ. ಈ ನಿಟ್ಟಿನಲ್ಲಿ ತಮ್ಮ ಈ ಕೃತಿ ಪೀಠಿಕಾ ರೂಪದಲ್ಲಿದೆ ಎಂಬುದನ್ನು ಡಾ|| ಸುಂದರ ಅವರು ನಮ್ರತೆಯಿಂದ ನುಡಿದಿದ್ದಾರೆ.

ಅಷ್ಟೇ ಅಲ್ಲ, ಸೂಕ್ಷ್ಮ ಶಿಲಾಯುಗದಿಂದ ಆದಿ ಇತಿಹಾಸದ ಕಾಲದವರೆಗಿನ ಸುಮಾರು 10–15 ಸಾವಿರ ವರ್ಷಗಳಲ್ಲಿ ಕರ್ನಾಟಕದ ಉತ್ತರ ಭಾಗದಲ್ಲಿ ಅದೆಷ್ಟು ಪ್ರಕಾರಗಳಲ್ಲಿ ಈ ಕಲಾ ಸಿರಿವಂತಿಕೆಯು ಸೋಜಿಗಪಡುವಂತೆ ಬೆಳೆದುಬಂದಿದೆ ಎಂಬುದನ್ನು ವಿವರಿಸುತ್ತಾರೆ. ಬಾದಾಮಿ–ಐಹೊಳೆ ಪ್ರದೇಶವೇ ದಕ್ಷಿಣ ಭಾರತದ ಅತಿ ಪ್ರಾಚೀನ ಪ್ರಾಗಿತಿಹಾಸ ಕಾಲದ ವರ್ಣ ಚಿತ್ರಕಲೆಯ ಆಗರ ಎಂಬುದನ್ನು ಸುಂದರ ಅವರು ಸ್ಪಷ್ಟಪಡಿಸುತ್ತಾರೆ. ಅಲ್ಲದೆ ಗಡಿನಾಡ ಚಿತ್ರಗಳು ಹೆಚ್ಚಾಗಿ ಹಿರೆಬೆನಕಲ್ ಹಂಪೆ ಪ್ರದೇಶದಲ್ಲಿವೆ. ಉತ್ತರ ಕರ್ನಾಟಕದಲ್ಲಿ ಈ ಭಾಗ ಚಿತ್ರಕಲೆಯ ಕೇಂದ್ರಸ್ಥಾನ ಎಂದು ಅಭಿಪ್ರಾಯ ಪಡುತ್ತಾರೆ.

ಈ ಕೃತಿಯಲ್ಲಿ ಗವಿ ಹಾಗೂ ಬಯಲು ಬಂಡೆ ಚಿತ್ರಗಳು, ಚಿತ್ರ ಪ್ರಕಾರಗಳು,ಅವುಗಳಲ್ಲಿನ ಹೋಲಿಕೆ ಮತ್ತು ಅವುಗಳ ಕಾಲಮಾನದ ವಿವರಗಳನ್ನು ಗಮನಿಸಬಹುದಾಗಿದೆ. ಅಲ್ಲದೆ ಧಾರ್ಮಿಕ ಅರ್ಥ ನೀಡುವ ಮಂಡಲ ಸೂಚಕ ರೇಖಾಚಿತ್ರಗಳ ವಿವರವೂ ನಮಗೆ ದೊರೆಯುತ್ತದೆ. ಪಶು, ಪಕ್ಷಿ, ಮಾನವರ ಚಿತ್ರ ಪ್ರಕಾರಗಳ ವಿವರಗಳೂ, ಚಿತ್ರ ರಚಿಸುವಲ್ಲಿ ಅಂದಿನ ಅವರ ನಂಬಿಕೆಗಳ ಉದ್ದೇಶ ಎಲ್ಲವನ್ನೂ ಮನಗಾಣಬಹುದಾಗಿದೆ.

ಮೊದಲು ಡಾ|| ಸುಂದರ ಅವರು ಗುಲ್ಬರ್ಗಾ–ರಾಯಚೂರು–ಬಳ್ಳಾರಿ–ಚಿತ್ರದುರ್ಗ ಪ್ರದೇಶಗಳಲ್ಲಿ ಹುಟ್ಟಿದ, ಕೊರೆದ ಮತ್ತು ವರ್ಣದ ಒಟ್ಟು ಮೂರು ಪ್ರಕಾರಗಳ ಚಿತ್ರಕಲೆಯ ಅವಶೇಷಗಳನ್ನು ಗುರುತಿಸುತ್ತಾರೆ. ನಂತರ ಬಾದಾಮಿ ಐಹೊಳೆ ಪ್ರದೇಶದಲ್ಲಿ ವಿಶೇಷವಾಗಿ ಕಲ್ಲಾಸರೆಯ ವರ್ಣಚಿತ್ರಗಳೇ ಹೆಚ್ಚು ಎನ್ನುತ್ತಾರೆ. ಮೂರನೆಯದಾಗಿ ಕಡಲ ಪ್ರದೇಶ ಹಾಗೂ ಮಲೆನಾಡಿನ ಪ್ರದೇಶದಲ್ಲಿ ಕುಟ್ಟಿದ ಚಿತ್ರಗಳಾಗಲೀ, ವರ್ಣಚಿತ್ರಗಳಾಗಲೀ ಬೆಳೆದುಬಂದಿಲ್ಲ. ಆದರೆ ಈತನಕ ಶೋಧನೆ ಆಗಿರುವುದೆಲ್ಲಾ ಗೀರು ಚಿತ್ರಗಳೇ ಎಂದು ಸುಂದರ ಅವರು ಇಲ್ಲಿ ಸ್ಪಷ್ಟಪಡಿಸುತ್ತಾರೆ. ಗುಲ್ಬರ್ಗ–ಚಿತ್ರದುರ್ಗ ಪ್ರದೇಶವು ಈ ಎಲ್ಲ ಪ್ರಕಾರಗಳ ಸಂಗಮ ಪ್ರದೇಶವೆಂದು ಸದ್ಯಕ್ಕೆ ಹೇಳಬಹುದಾಗಿದೆ ಎನ್ನುತ್ತಾರೆ. ಇವರು ಗವಿ, ಕಲ್ಲಾಸರೆ, ವರ್ಣಚಿತ್ರಗಳ ಬಯಲು ಬಂಡೆ ಕುಟ್ಟಿದ ಹಾಗೂ ಗೀರು ಚಿತ್ರಗಳ ಒಟ್ಟು ಐವತ್ತೊಂಬತ್ತು ಸ್ಥಳಗಳನ್ನು ಗುರುತಿಸುತ್ತಾರೆ. ಇವುಗಳಲ್ಲಿ ಎರಡು ಗೋವಾದಲ್ಲಿದ್ದು ಉಳಿದವು ಕರ್ನಾಟಕದಲ್ಲಿವೆ.

ಈ ಕೃತಿಯ ಕೊನೆಯಲ್ಲಿ ಮೃತ್ ಪಾತ್ರೆ ಚಿತ್ರಗಳ ಹಾಗೂ ಸುಡಾವೆ ಮಣ್ಣಿನ ಗೊಂಬೆಗಳ ವಿವರ ಸಿಗುತ್ತದೆ. ಸಾವಿರಾರು ವರ್ಷಗಳ ಹಿಂದೆಯೇ ಬೆಳೆದುಬಂದ ನೈಸರ್ಗಿಕ ಗವಿಗಳೊಳಗೆ ಕಲ್ಲಾಸರೆಯಲ್ಲಿ–ಬಯಲು ಬಂಡೆಗಳ ಮೇಲೆ ಚಿತ್ರಗಳನ್ನು ಕಾಣುತ್ತೇವೆ. ನಾನಾ ಪ್ರಕಾರದ ರೇಖಾಚಿತ್ರಗಳನ್ನು ಅವುಗಳ ಶೈಲಿ, ಲಕ್ಷಣ, ಸ್ವರೂಪ, ವೈವಿಧ್ಯತೆ, ಕಾಲಮಾನ, ಬೆಳವಣಿಗೆ ಮೊದಲಾದವುಗಳನ್ನು ಲೇಖಕರು ವಿವೇಚಿಸಿರುವುದನ್ನು ಮನಗಾಣಬಹುದು.

ಡಾ|| ಸುಂದರ ಅವರು ಕೊನೆಯಲ್ಲಿ ಒಳ್ಳೆಯ ನಿಲುವಿಗೆ ಬರುತ್ತಾರೆ. ಪ್ರಾಗೈತಿಹಾಸಿಕ ಚಿತ್ರಗಳು ಅಂದಿನವರ ತಮ್ಮ ದೈನಂದಿನ ಜೀವನದ ಆರ್ಥಿಕ ಸಫಲತೆ ಮತ್ತು ಜನಾಂಗದ ವಂಶಾಭಿವೃದ್ಧಿ ಇವುಗಳ ಮೇಲೆ ಆಧಾರಿತವಾದುವು. ಇಂಥ ಚಿತ್ರಗಳನ್ನು ಬಿಡಿಸಿದವನು ಆ ಸಮಾಜದ ಸಾಮಾನ್ಯ ವ್ಯಕ್ತಿ, ಮಾಂತ್ರಿಕ ವಿಧಾನದಿಂದಲೂ ಪೂರೈಸುವ ಪ್ರಯತ್ನ ಅವನದು. ಈ ಕಲಾ ಪರಂಪರೆಯನ್ನು ಅಭಿವೃದ್ಧಿಗೊಳಿಸುತ್ತಾ ಬಂದ ಬುಡಕಟ್ಟಿಗೆ ಸೇರಿದವನಾಗಿದ್ದಾನೆ. ........... ಸಾಧಿಸಿಕೊಂಡು ಬಂದಂತಹ ವ್ಯಕ್ತಿಗಳಲ್ಲಿ, ಚಿತ್ರಗಳು ಸಾಂಕೇತಿಕ. ಆದ್ದರಿಂದ ಕೇವಲ ಛಾಯಾ ನಿರೂಪಣಾ ತಂತ್ರವನ್ನು ಬಳಸಿದ್ದು, ಇದು ಚಾರಿತ್ರಿಕ ಯುಗದಲ್ಲೂ ಮುಂದುವರಿಯಿತು. ಆದ್ದರಿಂದ, ಅತಿ ಮುಖ್ಯವಾದ ಘಟಕಗಳ ಪರಂಪರೆಯ ಅಡಿಗಲ್ಲನ್ನು ಹಾಕಿದ ಕೀರ್ತಿ ಈ ಪ್ರಾಗೈತಿಹಾಸಿಕ ಮಾನವನಿಗೆ ಖಂಡಿತವಾಗಿಯೂ ಸಲ್ಲುತ್ತದೆ.

ಹತ್ತು ವರ್ಷಗಳ ಹಿಂದೆ ಚಿತ್ರದುರ್ಗದ ನನ್ನ ಮಿತ್ರರೂ, ಸಂಶೋಧಕರೂ, ಕನ್ನಡ ಅಧ್ಯಾಪಕರೂ ಆದ ಶ್ರೀ ಎಚ್. ಶ್ರೀಶೈಲ ಆರಾಧ್ಯರು 'ಸಂಶೋಧನೆಯ ಹಾದಿಯಲ್ಲಿ' ಎಂಬ ಕಿರುಹೊತ್ತಿಗೆಯನ್ನು ಹೊರತಂದಿದ್ದರು. ಅದರಲ್ಲಿ ಚಿತ್ರದುರ್ಗ ಚಂದ್ರವಳ್ಳಿ–ಬ್ರಹ್ಮಗಿರಿ ಬೆಟ್ಟದ

ಬಂಡೆಯ ಗವಿಗಳಲ್ಲಿನ ಚಿತ್ರಗಳು ನನ್ನ ಗಮನ ಸೆಳೆದಿದ್ದವು. ಅನಂತರ ಮೂರು ವರ್ಷಗಳ ಹಿಂದೆ ಹಂಪೆ ಕನ್ನಡ ವಿಶ್ವವಿದ್ಯಾಲಯದ ಆಡಳಿತ ಮಂಡಳಿಯ ಸಭೆಯಲ್ಲಿ ಭಾಗವಹಿಸಲು ಹೋದ ಸಂದರ್ಭ. ಆಗ ಡಾ|| ಚಿದಾನಂದಮೂರ್ತಿಯವರು ನಮ್ಮನ್ನು ಹಂಪೆಯ ಗುಡ್ಡ ಬೆಟ್ಟಗಳಲ್ಲಿ ಸುತ್ತಾಡಿಸಿ, ಅಲ್ಲಿನ ಬಂಡೆಗಳಲ್ಲಿರುವ ರೇಖಾಚಿತ್ರಗಳನ್ನು ತೋರಿಸಿದ್ದರು. ನಾವೇ ಅಕಾಡೆಮಿ ಮೂಲಕ ರಾಜ್ಯದ ಹಲವಾರು ಕಡೆ ದೇವಾಲಯ, ಅರಮನೆ–ಗುರುಮನೆಗಳಲ್ಲಿನ ಭಿತ್ತಿಚಿತ್ರಗಳನ್ನು ವಿಡಿಯೋ ಮಾಡಿಕೊಂಡು ಬಂದಿದ್ದೆವು.

ಈ ಎಲ್ಲ ಹಿನ್ನೆಲೆಯಲ್ಲಿ ಹಂಪೆಯ–ಆನೆಗೊಂದಿ ಸಮೀಪದ ಬಯಲು ಬಂಡೆಗಳಲ್ಲಿನ ಆದಿಮಾನವ ಚಿತ್ರಗಳನ್ನು ನೋಡುವ ಅವಕಾಶ ನನಗೆ ತಪ್ಪಿಹೋಯಿತು. ಅವುಗಳು ಇರುವ ಸ್ಥಳದ ಸಮೀಪಕ್ಕೆ ನಾನು, ರಿಜಿಸ್ಟ್ರಾರ್ ಮುಕುಂದನ್, ಅ.ಲ. ನರಸಿಂಹನ್ ಮೊದಲಾದ ಮಿತ್ರರು ಹೋದೆವಾದರೂ ನನ್ನ ಅನಾರೋಗ್ಯದಿಂದ ನರಳುತ್ತ ವಾಹನದಲ್ಲಿ ಇರಬೇಕಾಗಿ ಬಂದಿತು. ಇಷ್ಟು ಸಮೀಪಕ್ಕೆ ಬಂದೂ ನೋಡಲಾಗಲಿಲ್ಲವಲ್ಲಾ ಎಂಬ ಕೊರಗು ಮಾತ್ರ ಸದಾ ಕಾಡುತ್ತಿತ್ತು. ಆದರೆ ಸಂಡೂರಿನಲ್ಲಿ ಕಲಾಶಿಬಿರದ ಸಂದರ್ಭದಲ್ಲಿ ನಾವು ಕೆಲವು ಮಿತ್ರರಿಗೆ (ಆರ್.ಎಂ. ಹಡಪದ್, ಧನಲಕ್ಷ್ಮಿ, ಎಂ.ಸಿ. ಚೆಟ್ಟಿ, ಬಸವರಾಜ ಹಾಗೂ ಉಪ್ಪಿನ ಮರಿಶಾಮಾಚಾರ್) ಸೂಗೂರ್ ನೋಡಿಬರುವ ಅವಕಾಶ ದೊರೆಯಿತು.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಂಬಂಧಿಸಿದ– 'ಚಿತ್ರದುರ್ಗ ಪರಿಸರ ಬಯಲು ಬಂಡೆ ರೇಖಾಚಿತ್ರಗಳು' ಎಂಬ ವಿಷಯದ ಬಗ್ಗೆ ಶ್ರೀ ಲಕ್ಷ್ಮಣ್ ತೆಲಗಾವಿ ಕೆಲಸ ಮಾಡತೊಡಗಿದ್ದಾರೆ. ಈ ಜಿಲ್ಲೆಯ 20ಕ್ಕೂ ಹೆಚ್ಚು ಗುಡ್ಡಗಳ ಪರಿಸರದಲ್ಲಿ ಸಂಶೋಧನೆ ನಡೆಸಿದ್ದಾರೆ. ಪ್ರಾಕ್ಚಾರಿತ್ರಿಕ ಕಾಲದಿಂದ ನಾಯಕರ ಪ್ರಭುತ್ವದವರೆಗಿನ ಅಸಂಖ್ಯ ವರ್ಣಚಿತ್ರ, ರೇಖಾಕೃತಿಗಳನ್ನು ಪತ್ತೆ ಮಾಡಲಾಗಿದೆ. ಬರವಣಿಗೆಯ ಹಂತದಲ್ಲಿರುವ ಈ ಯೋಜನೆಯು ಒಂದು ಉತ್ತಮ ಕೊಡುಗೆಯಾಗಲಿದೆ.

ಈ ಕೃತಿಯನ್ನು ಓರಣವಾಗಿ ರಚಿಸಿಕೊಟ್ಟ ವಿದ್ವಾಂಸರಾದ ಡಾ|| ಸುಂದರ ಅವರನ್ನು, ಹಾಗೂ ಸುಂದರವಾಗಿ ಮುದ್ರಿಸಿಕೊಟ್ಟ ಮುದ್ರಕ ಅವರನ್ನು ಅಭಿನಂದಿಸುತ್ತೇನೆ.

**ಪಿ. ಆರ್. ತಿಪ್ಪೇಸ್ವಾಮಿ**
ಪ್ರಧಾನ ಸಂಪಾದಕರು
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು.

# ಮೊದಲ ಮಾತು

1957 ಜುಲೈ ತಿಂಗಳಿನಿಂದ ಪ್ರಾರಂಭವಾದ ನನ್ನ ಪುರಾತತ್ವ ಪ್ರಾದೇಶಿಕ ಅನ್ವೇಷಣೆಯಲ್ಲಿ, 1961 ಮತ್ತು 1968 ಒಂದು ಮಹತ್ವದ ಘಟ್ಟ. ಆನೆಗೊಂದಿ–ಚಿಕ್ಕರಾಮಪುರ–ವೆಂಕಟಾಪುರ ಅನಂತರ ಹಿರೆ ಬೆನಕಲ್‌ನಲ್ಲಿ ಪ್ರಥಮ ಕೆಲವು ವರ್ಣಚಿತ್ರ ಗವಿಗಳನ್ನು ಶೋಧಿಸಿದೆನು. ಅನಂತರ 1974ರಿಂದ ಉತ್ತರ ಕರ್ನಾಟಕದ ಇಂಥ ಬಂಡೆ–ಗವಿ ಚಿತ್ರಗಳ ಮೇಲೆ ಒಂದು ಪುಸ್ತಕವನ್ನು ಬರೆಯಲು ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಸ್ವಲ್ಪ ಧನ ಸಹಾಯದಿಂದ ಹೆಚ್ಚಾಗಿ ಪ್ರಾಗಿತಿಹಾಸ ಕಾಲದ ಬಂಡೆ–ಗವಿ ಚಿತ್ರಗಳ ಶೋಧನೆಯನ್ನು 1978ರ ವರೆಗೆ ಸಮಯ ಸಿಕ್ಕಾಗೆಲ್ಲ ಮುಂದುವರೆಸಿದೆನು. ಅನಂತರ ನನ್ನ ಶೋಧನೆ ಕಾರ್ಯವು ತುಂಬಾ ಕುಂಟುತ್ತಾ ಸಾಗಿತು. ಅನಿವಾರ್ಯ ಕಾರಣಗಳಿಂದ. ಅತ್ಯಂತ ಈಚಿನ ಶೋಧನೆಯೆಂದರೆ, 1994ರ ಏಪ್ರಿಲ್ ತಿಂಗಳಲ್ಲಿ ಹೊಳಲೂರ (ಶಿವಮೊಗ್ಗ ಜಿಲ್ಲೆ) ಗೀರು ಚಿತ್ರಗಳು (Rock engravings). 1957ರಿಂದಲೇ ಶೋಧಿಸುತ್ತಿದ್ದ ಶಿಲಾ–ತಾಮ್ರಯುಗ ಹಾಗೂ ಬೃಹತ್ ಶಿಲಾ ಸಂಸ್ಕೃತಿ ನೆಲೆಗಳಿಂದ ಲೆಕ್ಕವಿಲ್ಲದಷ್ಟು ಬಣ್ಣಬಣ್ಣದ ರೇಖಾ ಚಿತ್ರಗಳಿಂದ ಚೆಲುವುಗೊಳಿಸಿದ ಮೃತ್ ಪಾತ್ರೆಗಳ ಚೂರುಗಳನ್ನು ಸಂಗ್ರಹಿಸಿ ಅಧ್ಯಯನ ಮಾಡುತ್ತಿದ್ದೆ. ಇವೆಲ್ಲ ಶೋಧನೆಗಳ ಮೇಲೆ ಆಗಾಗ್ಗೆ ಲೇಖನಗಳನ್ನು ಪ್ರಕಟಿಸಿದ್ದೇನೆ. ಮುಖ್ಯವಾಗಿ ಕರ್ನಾಟಕ ಆರ್ಕಿಯಾಲಜಿ (ಪ್ರಾಚೀನ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾಲಯ), ಸವಿ–ಸಂಚಯ (ಶ್ರೀ ಎಸ್. ಸದಾಶಿವ ಒಡೆಯರ ಅಭಿನಂಧನ ಗ್ರಂಥ) ಹಾಗೂ ಹರಿತಿಸಿರಿ ಗ್ರಂಥಗಳಲ್ಲಿ ಪ್ರಕಟವಾದ ಹಾಗೂ ನನ್ನ ಇತರೆ ಲೇಖನಗಳನ್ನು ಮತ್ತೆ ಪರಿಶೀಲಿಸಿ, ಇತರ ಸಂಶೋಧಕರ ಹಾಗೂ ನನ್ನ ಈಚಿನ ಶೋಧನೆಗಳನ್ನು ಸಮನ್ವಯ ಮಾಡಿ, ಈ ಹೊತ್ತಿಗೆಯನ್ನು ಸಿದ್ಧಪಡಿಸಿದ್ದೇನೆ.

ಈ ಹೊತ್ತಿಗೆಯಲ್ಲಿ ಕರ್ನಾಟಕ (ನಿಜಕ್ಕೂ ಉತ್ತರ ಕರ್ನಾಟಕ)ದ ಪ್ರಾಗಿತಿಹಾಸ ಕಾಲದ ಅಂದರೆ ಸೂಕ್ಷ್ಮ ಶಿಲಾಯುಗ (ಸು.ಕ್ರಿ.ಪೂ. 10,000–7,000)ದಿಂದ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿ ಹಂತದ ಕೊನೆ(ಕ್ರಿ.ಪೂ. 1200–200)ಯವರೆಗಿನ ಕಲಾ ಪ್ರಕಾರಗಳ ಉದಾಹರಣೆಗಳೊಂದಿಗೆ ಒಂದು ಸಾಮಾನ್ಯ ಪರಿಚಯ ಮಾಡುವ ಪ್ರಯತ್ನವಿದೆ. ಇತಿಹಾಸ ಕಾಲದ ಕೆಲವು ಗವಿ ವರ್ಣಚಿತ್ರಗಳನ್ನು ವಿವರಿಸಿದ್ದೇನೆ. ಪ್ರಾಗಿತಿಹಾಸ ಕಾಲದ ಈ ಕಲಾ ಪರಂಪರೆಯು ತರುವಾಯ–ಇತಿಹಾಸ ಕಾಲದಲ್ಲಿ ಇಂದಿನವರೆಗೂ ಉಳಿದು ಬಂದಿರುವುದನ್ನು ತೋರಿಸಲು ಇವುಗಳನ್ನು ವಿವೇಚಿಸಲಾಗಿದೆ. ಒಬ್ಬ ಸಾಮಾನ್ಯ ಓದುಗನಿಗೂ

ಅಡೆ–ತಡೆಯಾಗದಂತೆ, ಸಾಧ್ಯವಾದಷ್ಟು ಅವನ ಆಸಕ್ತಿಯನ್ನು ಕೆರಳಿಸುವ ಉದ್ದೇಶವನ್ನಿಟ್ಟುಕೊಂಡು ಬಿಡಿ ಬಿಡಿ ನೆಲೆಗಳಲ್ಲಿಯ ಪ್ರತಿಯೊಂದು ಚಿತ್ರವನ್ನು ವರ್ಣಿಸಿಲ್ಲ. ಇತಿಹಾಸ ಕಾಲದ ಶಿಷ್ಟಾಚಾರದ ಕಲೆ ರೂಪುಗೊಳ್ಳುವುದಕ್ಕೆ, ತತ್ಸಂಬಂಧ ಗ್ರಂಥಗಳು, ತರಬೇತಿಯನ್ನು ನೀಡುವ ಕಲಾ ಶಾಲೆಗಳು ಹುಟ್ಟುವುದಕ್ಕೆ ಬಹಳ ಹಿಂದೆಯೇ ಸಾವಿರಾರು ವರ್ಷಗಳಿಂದ ಬೆಳೆದು ಬಂದ ನೈಸರ್ಗಿಕ ಗವಿಗಳೊಳಗೆ ಕಲ್ಲಾಸರೆಗಳಲ್ಲಿ ಬಯಲು ಬಂಡೆಗಳ ಮೇಲೆ ನೇರವಾಗಿ ಕೆಮ್ಮಣ್ಣಿನ ಹಾಗೂ ಇತರ ಬಣ್ಣಗಳ ಮಣ್ಣಿನಿಂದ ಸಿದ್ಧಮಾಡಿಕೊಂಡ ಬಣ್ಣಗಳಿಂದಲೂ, ಒಂದೇ ಸಮನೆ ಕುಟ್ಟಿ ಕುಟ್ಟಿ ರೂಪಿಸಿದ ಅಥವಾ ಚೂಪಾದ ಮೊನೆಯುಳ್ಳ ಅತಿ ಗಟ್ಟಿಕಲ್ಲಿನಿಂದ ಅಥವಾ ಲೋಹದ ಉಳಿಯಿಂದ ಗೀರಿದ ಮನುಷ್ಯ, ಪ್ರಾಣಿ, ಕಟ್ಟಳೆ ಮಾಡಲಗಳ ರೇಖಾ ಚಿತ್ರಗಳು, ಛಾಯಾಚಿತ್ರಗಳು, ಹಾಗೂ ತಮ್ಮ ವಾಸ್ತವ್ಯ ನೆಲೆಗಳಲ್ಲಿ ಮನೆಯಲ್ಲಿಯೇ ಜೇಡಮಣ್ಣಿನಿಂದ ರೂಪಿಸಿದ ಗೊಂಬೆಗಳು, ಮತ್ತು ಅಂದವಾಗಿಸಲು ನಿತ್ಯೋಪಯೋಗಿ ಮಣ್ಣಿನ ಪಾತ್ರೆಗಳ ಮೇಲೆ ವಿವಿಧ ಬಣ್ಣಗಳಲ್ಲಿ ಬಿಡಿಸಿದ ನಾನಾ ಪ್ರಕಾರದ ರೇಖಾ ಚಿತ್ರಗಳು, ಅವುಗಳ ಸಾಮಾನ್ಯ ಸ್ವರೂಪ, ಲಕ್ಷಣ, ವೈವಿಧ್ಯ, ಶೈಲಿ, ಕಾಲಮಾನ ಮೊದಲಾದವುಗಳನ್ನು ಸಂಬಂಧಿಸಿದ ಚಿತ್ರಗಳೊಂದಿಗೆ ಈ ಹೊತ್ತಿಗೆಯಲ್ಲಿ ವಿವೇಚಿಸಲಾಗಿದೆ. ಇವುಗಳ ಸಾಂಸ್ಕೃತಿಕ ಅಧ್ಯಯನವನ್ನು ಮಾಡದೆ ಒಟ್ಟಾರೆ ಈ ವೈವಿಧ್ಯಮಯ ಜನಸಾಮಾನ್ಯ ಕಲೆಯ ಪ್ರಕಾರ ಮತ್ತು ಸ್ಥೂಲ ಬೆಳವಣಿಗೆಯೇ ಈ ವಿವೇಚನೆಯ ಮುಖ್ಯ ವಿಷಯ.

ಇದುವರೆಗೂ ಆದ ಶೋಧನೆಗಳಲ್ಲಿ ರಾಮದುರ್ಗ (ಬೆಳಗಾಂವ್ ಜಿಲ್ಲೆ) ಬಾದಾಮಿ–ಐಹೊಳೆ, ಹಿರೆ ಬೆನಕಲ್–ಹಂಪಿ, ಬ್ರಹ್ಮಗಿರಿ–ಚಿತ್ರದುರ್ಗ ಪ್ರದೇಶಗಳಲ್ಲಿ ಬಹಳ ವರ್ಣ ಚಿತ್ರ ಗವಿಗಳು, ಬಯಲು ಬಂಡೆ ಚಿತ್ರಗಳು ಇದ್ದು ಇವು ಈ ಕಲಾ ಚಟುವಟಿಕೆಗಳ ಕೇಂದ್ರ ಪ್ರದೇಶಗಳೆಂದು ತೋರುತ್ತವೆ. ಅಂತೆಯೇ ಇತ್ತೀಚೆಗೆ ಮಲೆನಾಡು– ಪಶ್ಚಿಮ ಕಡಲು ಪ್ರದೇಶವೂ ಈ ದಿಶೆಯಲ್ಲಿ ಆಶಾದಾಯಕವಾಗಿದೆ. ಈ ಪ್ರದೇಶಗಳಲ್ಲಿ ಭೋಪಾಲ್ ಹತ್ತಿರದ ಭೀಂಬೆಟ್ಕಾದಲ್ಲಿದ್ದಂತೆ ಇನ್ನೂ ಇಂಥ ನೂರಾರು ನೆಲೆಗಳಿರುವಂತೆ ತೋರುತ್ತದೆ. ದಕ್ಷಿಣ ಕರ್ನಾಟಕದಲ್ಲಿಯ ಒಂದೇ ಒಂದು ನೆಲೆಯನ್ನು ಮಾತ್ರ ದಿ. ವಿ.ಡಿ. ಕೃಷ್ಣಸ್ವಾಮಿಯವರು ತಮ್ಮ ಅಪ್ರಕಟಿತ ಕುಪ್ಪಗಲ್ಲಿನ ಬಂಡೆ ಚಿತ್ರಗಳ ಲೇಖನವೊಂದರಲ್ಲಿ ತಿಳಿಸಿದ್ದಾರೆ. ಆದರೆ ಇದರ ಕೂಲಂಕಷ ಅಧ್ಯಯನವು ಆಗಿಲ್ಲ. ಇದರಿಂದ ಈ ಪ್ರದೇಶದಲ್ಲೂ ಇಂಥ ಅನೇಕ ಪ್ರಾಗಿತಿಹಾಸ ಕಾಲದ ಚಿತ್ರಗಳಿರುವ ಸಾಧ್ಯತೆಯನ್ನು ಸೂಚಿಸುತ್ತದೆ. ಇವೆಲ್ಲವನ್ನು ಗಮನಿಸಿದಾಗ ಮಾಡಬೇಕಾದ ಶೋಧನೆಯು ಅಪಾರ. ಛಲವಾದಿ ಯುವಕ ಸಂಶೋಧಕರು ಹೆಚ್ಚಿನ ಸಂಖ್ಯೆಯಲ್ಲಿ ಮುಂದೆ ಬಂದು ಈ ಮಹತ್ಕಾರ್ಯವನ್ನು ಮುಂದುವರೆಸಬೇಕಾಗಿದೆ. ಇದುವರೆಗೂ ಆದ ಶೋಧನೆಗಳು ಹೆಚ್ಚೆಚ್ಚು ಪ್ರಚಾರವಾದಲ್ಲಿ ಇಂಥ ಸಂಶೋಧಕರು ಈ ಕಾರ್ಯವನ್ನು ಕೈಗೆತ್ತಿಕೊಳ್ಳುವರೆಂಬ ಭರವಸೆಯಿಂದ ಪೀಠಿಕಾ ರೂಪದಲ್ಲಿ ಈ ಹೊತ್ತಿಗೆಯನ್ನು ಬರೆಯಲಾಗಿದೆ.

ಈ ಹೊತ್ತಿಗೆಯಲ್ಲಿ ನನ್ನ ಕ್ಷೇತ್ರ ಕಾರ್ಯಗಳಲ್ಲಿ ಚಿತ್ರಿಸಿಕೊಂಡ ಛಾಯಾ ಚಿತ್ರಗಳೇ ಹೆಚ್ಚಾಗಿವೆ. ಡಾ. ಎಸ್.ವಿ. ಪಾಡಿಗಾರ್ ಸಿದ್ಧನ ಕೊಳ್ಳದಲ್ಲಿಯ, ಶ್ರೀ ಲಕ್ಷ್ಮಣ ತೆಲಗಾವಿಯವರು ಚಿತ್ರದುರ್ಗದಲ್ಲಿಯ, ಶ್ರೀ ಎಂ. ನಂಬಿರಾಜನ್ ಕಜೂರು ಮತ್ತು ಉಸ್‌ಗಾಲಿಮೋಲ್ (ಗೋವಾ)ದಲ್ಲಿಯ, ಡಾ.ಇ.ಒ. ತಿಲ್ನರ್, ಡಾ. ಆರ್. ಎಂ. ಷಡಕ್ಷರಯ್ಯ ಮಲ್ಲಾಪುರದಲ್ಲಿಯ ತಮ್ಮ ಶೋಧನೆಗಳ ಛಾಯಾಚಿತ್ರಗಳನ್ನು, ಲಘು ಟಿಪ್ಪಣಿಗಳನ್ನು ಡಾ. ರಘುನಾಥ ಭಟ್ಟರು ಸೊಂದಾದಲ್ಲಿ ತಮ್ಮ ಶೋಧನೆಯ ಬಗ್ಗೆ ಸಣ್ಣ ಟಿಪ್ಪಣಿಯನ್ನು ಒದಗಿಸಿ ಉಪಕರಿಸಿದ್ದಾರೆ. ಇರ್ವಿನ್ ನ್ಯೂಮೇಯರ್‌ರವರು ಅದರ ರೇಖಾಚಿತ್ರಗಳನ್ನು ಉಪಯೋಗಿಸಿಕೊಳ್ಳಲು ನನ್ನನ್ನು ಒಮ್ಮೆ ಭೇಟಿಯಾದಾಗ ಅನುಮತಿ ನೀಡಿದ್ದಾರೆ. ಈ ರೇಖಾಚಿತ್ರಗಳ ಪ್ರತಿಗಳನ್ನು ಶ್ರೀ ಶಿವಪೂಜಿಮಠ ಅವರು ಮಾಡಿಕೊಟ್ಟಿದ್ದಾರೆ. ಶ್ರೀ ವಿ. ಎಂ. ಬಿರಾದಾರ ಅವರು ನನ್ನ ಈ ಹೊತ್ತಿಗೆಯ ಹಸ್ತಪ್ರತಿಯ ಬೆರಳಚ್ಚು ಪ್ರತಿಯನ್ನು ಮಾಡಿದ್ದಾರೆ. 1994 ಮಾರ್ಚ್ ತಿಂಗಳಲ್ಲಿ ವಿಜಾಪುರದಲ್ಲಿಯ ಶ್ರೀ ಸಿದ್ಧೇಶ್ವರ ಕಲಾ ಸಂಸ್ಥೆಯಲ್ಲಿ ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು ಇವರ ನೆರವಿನಿಂದ ನಡೆಸಿದ ಸಮಾಕಾಲೀನ ವರ್ಣ ಚಿತ್ರ ಶಿಬಿರದಲ್ಲಿ ಈ ಸಂಸ್ಥೆಯ ಮುಖ್ಯಸ್ಥರಾದ ಶ್ರೀ ಸಿ.ಬಿ. ಕಾಚಾಪುರ ಅವರು ನನಗೆ ಕರ್ನಾಟಕದ ಪ್ರಾಚೀನ ಕಲೆಯ ಬಗ್ಗೆ ಒಂದು ಉಪನ್ಯಾಸ ಕೊಡಲು ಅವಕಾಶ ಮಾಡಿಕೊಟ್ಟಾಗ ನಾನು ಪ್ರಾಗಿತಿಹಾಸ ಕಾಲದ ಚಿತ್ರಕಲೆಯ ಬಗ್ಗೆ ಮಾತನಾಡಿದುದನ್ನು ಒಂದು ಪುಸ್ತಕ ರೂಪದಲ್ಲಿ ತಮ್ಮ ಅಕಾಡೆಮಿಯ ಪ್ರಕಟಣೆಗೋಸ್ಕರ ಬರೆದುಕೊಡಬೇಕೆಂದು ಆಗ ಅಲ್ಲಿ ಉಪಸ್ಥಿತರಿದ್ದ ಈ ಅಕಾಡೆಮಿಯ ಅಧ್ಯಕ್ಷರು ಶ್ರೀ ಪಿ. ಆರ್. ತಿಪ್ಪೇಸ್ವಾಮಿಗಳು ಕೇಳಿಕೊಂಡರು. ಅವರ ಒಂದು ಕೋರಿಕೆಯು ನನಗೆ ಹಿಂದಿನಿಂದಲೂ ಮಾಡಬೇಕೆಂದಿದ್ದ ಹೊತ್ತಿಗೆಯನ್ನು ಸಿದ್ಧಮಾಡಲು ಮತ್ತೆ ಸ್ಫೂರ್ತಿಯನ್ನು ಒದಗಿಸಿತು. ಶ್ರೀ ಕೆ. ಮುಕುಂದನ್ ಅಕಾಡೆಮಿ ರಿಜಿಸ್ಟ್ರಾರ್ ಅದರಂತೆಯೇ ತಿಳಿಸಿದರು. ಈಗ ಈ ಪುಸ್ತಕವು ಅಂದವಾಗಿ ಪ್ರಕಟವಾಗಿದೆ. ಇವರೆಲ್ಲರಿಗೂ ಮತ್ತು ಲಲಿತ ಕಲಾ ಅಕಾಡೆಮಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

—ಅ. ಸುಂದರ

ಧಾರವಾಡ

ದಿ. 31–08–1994

# ಪರಿವಿಡಿ

# 1. ಪೀಠಿಕೆ

ಬಹಳ ಕಾಲದ ಹಿಂದೆ ಅತ್ಯಂತ ನಿಕಟವರ್ತಿಯಾಗಿ ನಿಸರ್ಗದೊಂದಿಗೆ ಹೊಂದಿಕೊಂಡು ಮನುಷ್ಯನು ಪಶು–ಪಕ್ಷಿಗಳೊಡನೆ, ಗಿಡ–ಮರಗಳ, ಹೂ–ಬಳ್ಳಿಗಳ, ನದಿ ಬೆಟ್ಟಗಳ ಕಾಡು–ಮೇಡುಗಳ ಪರಿಸರದಲ್ಲಿ ತನ್ನ ಜೀವನವನ್ನು ಸುಧಾರಿಸಿಕೊಳ್ಳುತ್ತಾ ಸಾಗಿಸುತ್ತಿದ್ದಾಗ, ಸಹಜವಾಗಿಯೇ ಅವನ ವಿಕಸಿಸುತ್ತಿರುವ ಮನಸ್ಸು, ಹೃದಯ ಇವೆಲ್ಲದರಲ್ಲಿಯ ಚೆಲುವಿನ ಕಡೆ ಹರಿಯಿತು. ನೋಡುತ್ತಾ ಹೋದಾಗೆಲ್ಲ ಏನೋ ಒಂದು ಅವರ್ಣನೀಯ ಸಂತೋಷ ಉಂಟಾಗಿರಬೇಕು. ಆ ಅಪೂರ್ವ ಅನುಭವ ಉತ್ಕಟವಾದಾಗ ಅದನ್ನು ವ್ಯಕ್ತಪಡಿಸಿದ ಪ್ರಯತ್ನವೇ ಕಲಾಸೃಷ್ಟಿಗೆ ನಾಂದಿಯಾಯಿತು. ಸರಿ, ಮಳೆ ಬಿಸಿಲಿನಿಂದ ರಕ್ಷಿತವಾದ ಚಿತ್ರಪಟದಂತಿರುವ ಕಲ್ಲಾಸರೆಯ ಮೇಲೆ ಅಲ್ಲಿಯೇ ಬಿದ್ದಿದ್ದ ಕೆಂಪು, ಹಸಿರು, ಕಪ್ಪು, ಹಳದಿ, ಬಿಳಿ ಮಣ್ಣಿನ ಗಟ್ಟಿಗಳಿಂದ ಬಣ್ಣ ದ್ರವಗಳನ್ನು ಮತ್ತು ಗಿಡದ ಟೊಂಗೆಯ ತುದಿಯನ್ನು ಜಜ್ಜಿ ಇಲ್ಲವೆ ಪ್ರಾಣಿಗಳ ಕೂದಲನ್ನು ಒಟ್ಟು ಮಾಡಿ ಕಟ್ಟಿ ಮಾಡಿದ ಕುಂಚಗಳಿಂದ ಇಲ್ಲವೆ ಹರಿತ ಮೊನೆಯುಳ್ಳ ಒಂದು ಕಲ್ಲಿನ ಚಕ್ಕೆ(burin)ಯನ್ನು ಪ್ರಾಣಿ ಎಲುಬಿನ ದಂತದ ಮೇಲೆ ಬಲವಾಗಿ ಊರುವುದರಿಂದಲೂ ಅಥವಾ ಹಿಡಿಯಲು ಅನುಕೂಲವಾದ ಸಪೂರವಾದ ಮೊಂಡು ತುದಿಯುಳ್ಳ ಉದ್ದನೆ ಕಲ್ಲು ತುಂಡಿನಿಂದ ಬಯಲು ಬಂಡೆ ಮೇಲೆ ಒಂದೇ ಪ್ರಕಾರವಾಗಿ ಕುಟ್ಟುವುದರಿಂದ, ಕೊರೆಯುವುದರಿಂದ ಅಥವಾ ಗಾಳಿಸಿದ ಕಲಸು ಮಣ್ಣಿನಿಂದ, ಬೇಕಾದ ಗಾತ್ರದ ದಂತದ ಚೂರನ್ನು ಕೆತ್ತುವುದರಿಂದ ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡ ಚಿತ್ರಗಳನ್ನೋ, ಗೊಂಬೆಗಳನ್ನೋ ಸೃಷ್ಟಿಸಲು ಶುರುಮಾಡಿದ.

ತನ್ನ ಭಾವನೆಯ ತೀವ್ರತೆಯ ಅಭಿವ್ಯಕ್ತಿಯೊಂದೇ ಇಂಥ ಕಲಾ ಸೃಷ್ಟಿಗೆ ಕಾರಣವಲ್ಲ. ಆಗಿನ ಜನವರ್ಗಗಳ ಜೀವನದಲ್ಲಿ ಎರಡು ಪ್ರಧಾನ ಅಂಶಗಳು: ಜೀವನ ಭರಣಕ್ಕೆ ಯಶಸ್ಕರ ಆಹಾರ ಸಂಪಾದನೆ ಹಾಗೂ ಆಹಾರವಾಗುವ ಪಶು–ಪಕ್ಷಿಗಳ, ಗಿಡ–ಮರ–ಬಳ್ಳಿಗಳ ಸಮೃದ್ಧ ಬೆಳವಣಿಗೆ ಮತ್ತು ತಮ್ಮ ತಮ್ಮ ವಂಶಾಭಿವೃದ್ಧಿ. ಈ ಆಶೋತ್ತರಗಳ ಯಶಸ್ವಿ ಪೂರೈಕೆಗೆ (ಪ್ರಾಯಶಃ ಕೆಲವು ಆಕಸ್ಮಿಕ ಘಟನೆಗಳ ಕಾರಣದಿಂದ) ಕೆಲವು ನಂಬಿಕೆಗಳು ತತ್ಸಂಬಂಧ ಕಟ್ಟುಕಟ್ಟಳೆಗಳು ಬೆಳೆದು ಬಂದವು. ಇದಕ್ಕೋಸ್ಕರ ಗರ್ಭ ಧರಿಸಿದ ಪ್ರಾಣಿ ಹಾಗೂ ಗರ್ಭಿಣಿ ಸ್ತ್ರೀ, ಬಾಣ, ಈಟಿಯಿಂದ ಚುಚ್ಚಲ್ಪಟ್ಟ ಪ್ರಾಣಿ, ಪ್ರಾಣಿಗಳ ಬೇಟೆಗೆ ಹೋಗುವ ಮುಂಚೆ ಯಶಸ್ಸಿನ ಬೇಟೆಯನ್ನು ಸೂಚಿಸುವ ಸಮೂಹ ನೃತ್ಯ ಇವೇ ಮೊದಲಾದ ವಿಷಯಗಳ ಚಿತ್ರಗಳನ್ನು ಬರೆದು

ಕಟ್ಟಳೆಗಳನ್ನು ಮಾಡುವ ಪದ್ಧತಿ ಪರಂಪರೆ ಬೆಳೆಯಿತು. ಮತ್ತು ಇವುಗಳಿಗೆ ಸಂಬಂಧಿಸಿದಂತೆ ತಮ್ಮ ಇಚ್ಛಾನುಸಾರ ಪ್ರಾಣಿ, ಪಶು–ಪಕ್ಷಿಗಳ ನಿಯಂತ್ರಣಕ್ಕೋಸ್ಕರ ಇಂಥ ಸಾಂಕೇತಿಕ ಮಾಂತ್ರಿಕ ರೇಖಾ ಕೃತಿಗಳೂ ಹುಟ್ಟಿಕೊಂಡವು. ಇಂಥ ಪರಂಪರೆಯ ಎಷ್ಟೋ ಅಂಶಗಳು ವಿಶ್ವದ ನಾನಾ ಭಾಗಗಳಲ್ಲಿಯ ಆದಿವಾಸಿಗಳ ಜಾನಪದ, ರೈತಾಪಿ ಹಾಗೂ ನಾಗರಿಕ ಜನವರ್ಗಗಳಲ್ಲಿ ಇನ್ನೂ ಉಳಿದು ಬಂದಿವೆ. ಆದ್ದರಿಂದ ವಿವಿಧ ಪ್ರಕಾರಗಳ ಇಂಥ ಚಿತ್ರಗಳನ್ನು ಸೃಷ್ಟಿಸುವ ಕಲಾ ಕುಶಲತೆ ಇಂದಿನವರೆಗೂ ಮುಂದುವರಿದು ಬಂದಿದೆ. ಅಷ್ಟೇ ಅಲ್ಲ, ಈ ಪದ್ಧತಿಯು ಶಿಷ್ಟಾಚಾರ ಕಲಾ ಸಂಪತ್ತಿನ ಮೇಲೆ ತಕ್ಕ ಮಟ್ಟಿನ ಗಂಭೀರ ಪ್ರಭಾವವನ್ನು ಬೀರಿತು.

ಇನ್ನು ಈ ಪ್ರಾಗಿತಿಹಾಸದ ಮಾನವ ತನ್ನಲ್ಲಿರುವ ಆನಂದಮಯ ಇಲ್ಲವೆ ಕಟ್ಟಳೆ ನಂಬಿಕೆಗಳ ಭಾವನೆಗಳಿಗೆ ಹೇಗೆ ರೂಪ ಕೊಡಬೇಕು? ಅದರಲ್ಲಿಯ ವಿಶಿಷ್ಟತೆಯನ್ನು ಯಾವ ರೀತಿಯಲ್ಲಿ ಮನಮುಟ್ಟುವಂತೆ ತೋರಿಸಬೇಕು? ಬರಿ ಆನೆ ಆಕೃತಿ ಅಷ್ಟೇ ಅಲ್ಲ, ಅದರ ಗಾಂಭೀರ್ಯ; ಗೂಳಿಯ, ಕಾಡುಕೋಣದ ಠೀವಿಯ ನಿಲುವು; ಸ್ತ್ರೀಯ ಮಾತೃತ್ವ; ಜಿಂಕೆಯ ವೇಗದ ನಡಿಗೆ; ಒಟ್ಟಿನಲ್ಲಿ ಇಂಥ ಮೂಲಭೂತ ಅಂಶಗಳಿಂದ ಅವು ಜೀವಕಳೆಯಿಂದ ತುಂಬಿರಬೇಕು. ವೈಶಿಷ್ಟ್ಯಪೂರ್ಣವಾಗಿರಬೇಕು. ಇಂಥ ಭಾವನಾ ಹಾಗೂ ವೈಶಿಷ್ಟ್ಯಪೂರ್ಣವಾದ ಕೃತಿಗಳಲ್ಲಿ ಯಥಾಸ್ಥಿತಿ, ಪ್ರತಿರೂಪಣ ಗೌಣ. ಸ್ತ್ರೀಯರಲ್ಲಿ ಪ್ರಕೃತಿದತ್ತವಾದ ಮಾತೃತ್ವವೇ ಪ್ರಧಾನ. ಇದರ ವಿಶಿಷ್ಟ ಲಕ್ಷಣಗಳು ತುಂಬು ಗರ್ಭಿಣಿಯ ಉಬ್ಬಿದ ಹೊಟ್ಟೆ ತುಂಬಿದ ಸ್ತನಗಳು; ಶರೀರದ ಉಳಿದ ಭಾಗಗಳು ಗೌಣ. ವಂಶಾಭಿವೃದ್ಧಿಗೆ ಆಧಾರಳಾದ ಸ್ತ್ರೀಯ ಈ ವಿಶಿಷ್ಟತೆಯನ್ನು ಮಾರ್ಮಿಕವಾಗಿ ತೋರಿಸಲು ಚಿತ್ರದಲ್ಲಿ ಇವನ್ನೇ ಪ್ರಧಾನವಾಗಿ ಮೂಡಿಸುವುದು. ಇದನ್ನು ಅತ್ಯುತ್ತಮವಾಗಿ ತೋರಿಸಲು ಮುಖವನ್ನು ಕೂದಲಿನಿಂದ ಮುಚ್ಚುವುದು, ಇಲ್ಲವೇ ಮುಖದ ಲಕ್ಷಣಗಳನ್ನು ಅಸ್ಪಷ್ಟವಾಗಿಸುವುದು(ಚಿತ್ರ 1.2) ಭಾರವಾದ ದೊಡ್ಡ ಹೊಟ್ಟೆಯನ್ನು ಹೊರಲು ಬಲಿಷ್ಠ ಸ್ಥೂಲ ತೊಡೆಗಳು, ಈ ರೀತಿ ಗೊಂಬೆಯನ್ನೋ ಚಿತ್ರವನ್ನೋ ರೂಪಿಸುವುದು.

ಹೀಗೆ ಕನಿಷ್ಟ 40,000 ವರ್ಷಗಳಷ್ಟು ಪ್ರಾಚೀನ ಕಾಲದಿಂದಲೇ ಅಂದರೆ ಅಂತ್ಯ ಹಳೆಶಿಲಾಯುಗ ಹಂತದಿಂದ ಇಂಥ ವಿವಿಧ ಪ್ರಕಾರಗಳ ಕಲಾ ಕೃತಿಗಳು ಸೃಷ್ಟಿಯಾಗುತ್ತಾ ಬಂದವು. ಸೂಕ್ಷ್ಮವಾಗಿ ಇನ್ನೂ ಪರಿಶೀಲಿಸಿದಾಗ ಈ ಪ್ರಾಚೀನ ಮಾನವರ ಸೌಂದರ್ಯ ಪ್ರಜ್ಞೆ ಇನ್ನೂ ಪ್ರಾಚೀನವೆಂದೇ ಹೇಳಬಹುದು. ಸುಮಾರು ಎರಡರಿಂದ ಐದು ಲಕ್ಷ (2,00,000–5,00,000) ವರ್ಷಗಳ ಹಿಂದಿನ ಮಾನವ ಸಂಸ್ಕೃತಿಯ ಅತ್ಯಂತ ಪ್ರಾಚೀನ ಹಂತವಾದ ಹಳೆ ಶಿಲಾಯುಗದ ಜನರು ಕೇವಲ ತಮ್ಮ ಆಹಾರ ಸಂಗ್ರಹಣೆಯ ಕಾರ್ಯಕ್ಕೆ ಕಲ್ಲಿನ ಉಪಕರಣಗಳನ್ನು ಸಿದ್ಧಮಾಡಿಕೊಳ್ಳುವುದರಲ್ಲಿ ತಾಂತ್ರಿಕ ಜಾಣ್ಮೆಯನ್ನು ತೋರಿಸಿರುವುದರ ಜೊತೆಗೆ, ಅಪರೂಪವಾಗಿ ಅವುಗಳ ಆಕೃತಿಯಲ್ಲಿ ಚೆಲುವನ್ನು ತರಲು ಪ್ರಯತ್ನಿಸಿದರು. ಬಣ್ಣಬಣ್ಣದ ಉತ್ತಮ ಜಾತಿಯ

ಕಲ್ಲಿನ ಆಯ್ಕೆ, ಏಕಪ್ರಕಾರದ ಹದವರಿತ ಸಮತೋಲನದ ಕೆತ್ತನೆ, ಕೇಂದ್ರದಲ್ಲಿಯ ಉದ್ದಗಲ ರೇಖೆಗಳ ಎರಡು ಬದಿಗಳ ಮತ್ತು ಬಾಹ್ಯ ಆಕೃತಿಯ ಸಮಪ್ರಮಾಣ ಇವು ಈ ಸಾದಾ ಉಪಕರಣವನ್ನು ಒಂದು ಸುಂದರ ಕಲಾಕೃತಿಯನ್ನಾಗಿ ಮಾಡಿದವು. ತಮ್ಮ ತಮ್ಮ ಆಹಾರ ಸಂಗ್ರಹಣೆ ಕಾರ್ಯವಾದ ನಂತರ ಉಪಯೋಗಿಸಲ್ಪಟ್ಟ ಉಪಕರಣಗಳು ಅಲ್ಲಲ್ಲಿ ಬಿಟ್ಟುಬಿಡುತ್ತಿದ್ದ ಜನರಲ್ಲಿ ಒಬ್ಬಿಬ್ಬರು ಅಂಥ ಚೆಲುವಿನ ಉಪಕರಣಗಳನ್ನು ಒಗೆಯಲು ಮನುಸ್ಸು ಬಾರದೆ ಮೆಚ್ಚುಗೆಯಿಂದ ತಮ್ಮ ಬಳಿಯಲ್ಲಿಯೇ ಇಟ್ಟುಕೊಂಡ ಉದಾಹರಣೆಗಳೂ ಇವೆ.

ಚಿತ್ರಕಲೆ ಎಂದೊಡನೆಯೇ ಭಾರತೀಯ ಇತಿಹಾಸದ ಪರಿಚಯವುಳ್ಳವರಿಗೆ ಈಗಾಗಲೇ ಜಗತ್ಪ್ರಸಿದ್ಧವಾಗಿರುವ ಅಜಂತಾ, ಎಲ್ಲೋರ, ಭಾಗ್(ಧಾರ್ ಜಿಲ್ಲೆ, ಮಧ್ಯಪ್ರದೇಶ), ಬಾದಾಮಿ, ಶಿತ್ತನವಾಸಲ್ (ಕೊಯಮತ್ತೂರು ಜಿಲ್ಲೆ, ತಮಿಳುನಾಡು) ಮೊದಲಾದೆಡೆಗಳಲ್ಲಿಯ ಶ್ರೇಷ್ಠ ತರಗತಿಯ ವರ್ಣಚಿತ್ರಗಳು ಸ್ಮೃತಿಪಟಲದಲ್ಲಿ ಬರುವುದು ಸಹಜ. ಈ ಚಿತ್ರಗಳೆಲ್ಲವೂ ಪರಂಪರಾನುಗತವಾಗಿ ಬಂದಂತಹವು. ಈ ಕಲಾವಿದ್ಯೆಯಲ್ಲಿ ನಿಷ್ಣಾತರಾದ ಹಾಗೂ ನುರಿತ ಗುರುವಿನ ಮಾರ್ಗದರ್ಶನ, ತರಬೇತಿಯನ್ನು ಪಡೆದು ಸಾಧನೆಯ ಬಲದಿಂದ ಶ್ರೇಷ್ಠ ಗುಣಮಟ್ಟ ಪಡೆದ ಪ್ರತಿಭಾವಂತ ಕಲಾವಿದರು, ರಾಜನ ಇಲ್ಲವೆ ಧಾರ್ಮಿಕ ಧನಿಕರ ಆಶ್ರಯದಲ್ಲಿ ಸೃಷ್ಟಿ ಮಾಡಿದಂತಹವು. ಈ ಚಿತ್ರಗಳಲ್ಲಿ ಸಮಾಜದ ಪರಂಪರೆ, ಅಭಿಲಾಷೆ, ಅಭಿರುಚಿಗಳಿಗನುಗುಣವಾಗಿ ಅರ್ಥಗರ್ಭಿತ ವಸ್ತು, ತಾಂತ್ರಿಕ ವೈಶಿಷ್ಟ್ಯ, ಕ್ರಮಬದ್ಧ ವರ್ಣಸಂಯೋಜನೆ, ಭಾವಪೂರ್ಣ ರೇಖಾವಿನ್ಯಾಸ ಮೇಲಾಗಿ, ವಸ್ತುವಿನ ವಿಶಿಷ್ಟ ಸಂಗತಿ, ವ್ಯಕ್ತಿಯನ್ನೆ ಪ್ರಧಾನವಾಗುಳ್ಳ ನಿರೂಪಣಾ ಶೈಲಿ ಇವೇ ಮೊದಲಾದ ಎದ್ದು ಕಾಣುವಂತಹ ವಿಶಿಷ್ಟ ಲಕ್ಷಣಗಳು ಇವೆ. ಜನಸಾಮಾನ್ಯರಲ್ಲದೆ ಮೇಧಾವಿಗಳೂ ಇವುಗಳನ್ನು ಕೂಲಂಕಷವಾಗಿ ನೋಡಿ, ಮೆಚ್ಚಿ, ತಲೆದೂಗಿ ಆನಂದ ಪಡುವಂತಹ ವರ್ಣಚಿತ್ರಗಳು ಇವು.

ಕನ್ನಡನಾಡು ಕಲೆಯಬೀಡು. ನಮ್ಮ ನಾಡಿನಲ್ಲಿ ಬಾದಾಮಿ ಚಾಲುಕ್ಯರ ಕಾಲದಿಂದ ಹಿಡಿದ ವಿಜಯನಗರ ಸಾಮ್ರಾಜ್ಯ ಮತ್ತು ತದನಂತರ ಕೆಲವು ಸಮಯದವರೆಗೂ ಕಟ್ಟಿಸಿದ ದೇವಾಲಯಗಳು ಅಪರಿಮಿತವಾಗಿವೆ. ಇವುಗಳು ಶಾಸ್ತ್ರಗಳ ನಿಯಮದಂತೆ ಅಥವಾ ಸಂಪ್ರದಾಯಬದ್ಧವಾಗಿ ಜನರ ಉಪಯೋಗಕ್ಕಾಗಿ ಕಟ್ಟಿದ ಕೇವಲ ದೇವ ಮಂದಿರಗಳಾಗಿರದೆ, ಸೂಕ್ಷ್ಮವಾಗಿ ಪರಮಾತ್ಮನ ವಿಶ್ವರೂಪದ ಮತ್ತು ಪ್ರಪಂಚದ ನಾನಾಮುಖಗಳ ದರ್ಶನ ಮಾಡಿಸುವ ಒಂದು ಮಹಾ ಪ್ರಯತ್ನದ ಫಲ. ಧಾರ್ಮಿಕ ಉದ್ದೇಶ, ಸಮಾಜದ ಅವಶ್ಯಕತೆ ಮತ್ತು ಪ್ರಭಾವ ಮುಂತಾದ ಐತಿಹಾಸಿಕ ವಿಷಯಗಳನ್ನು ಕ್ಷಣಹೊತ್ತು ಒತ್ತಟ್ಟಿಗಿಟ್ಟು ಇವುಗಳನ್ನು ನೋಡಿದಾಗ, ಈ ಮಹಾ ಪ್ರಯತ್ನ ಸಾಧನೆಯಲ್ಲಿ ನಮ್ಮ ಪ್ರಾಚೀನ ಶಿಲ್ಪಿಗಳು ತೋರಿಸಿದ ಆಳವಾದ ಧರ್ಮಶ್ರದ್ಧೆ, ಅಭ್ಯಾಸ, ನಿಸರ್ಗ ಸೌಂದರ್ಯದ ನಿಕಟ ಸಂಬಂಧ ಹಾಗೂ ಪರಿಚಯ ಮತ್ತು ಅಗಾಧವಾದ

ಪ್ರತಿಭಾಶಕ್ತಿ ಮತ್ತು ಜಾಣ್ಮೆ ಈ ದೇವಾಲಿಯುಗಳನ್ನು ಅಜರಾಮರವಾಗ ಕಲಯ ಬಲಯನ್ನಾಗಿಯೂ ಮಾಡಿವೆ. ಆದುದರಿಂದಲೇ ಇವುಗಳನ್ನು ಕಟ್ಟಿಸಿ ಸಾವಿರಾರು ವರ್ಷಗಳಾಗಿದ್ದರೂ ಕೂಡ, ಈಗಲೂ ನಮ್ಮವರೇ ಏಕೆ ವಿಶ್ವದ ನಾನಾ ಭಾಗಗಳಿಂದ ವಿವಿಧ ಧರ್ಮದ, ದೇಶದ ಸಹೃದಯರು ಬಂದು ಈಗ ಮೂಲೆಗುಂಪಾಗಿರುವ ಈ ಕಲೆಯ ಬಲೆಯೊಳಗೆ ತಾವಾಗಿಯೇ ಬಿದ್ದು ಆ ರಸಋಷಿಗಳಿಗೆ ಸಿದ್ಧಿಯಾದ ಸೌಂದರ್ಯದರ್ಶನ ಮಾಡುತ್ತಾರೆ. ಕ್ಷಣಕಾಲ ಅನಿರ್ವಚನೀಯ ಆನಂದಿಂದ ಅವರ ಮನಸ್ಸು ಹೃದಯ ಪುಲಕಿತವಾಗುತ್ತದೆ. ಈ ರಸಾಸ್ವಾದನೆ ಎಂದೂ ಮರೆಯಲಾಗದ ಘಟನೆಯಾಗಿ ನಿತ್ಯನೂತನವಾಗಿ ಅವರ ಮನದಲ್ಲಿ ಉಳಿಯುತ್ತದೆ.

ನಮ್ಮ ನಾಡಿನಲ್ಲಿ ಇಂಥ ಕಲೆ ಕೇವಲ ವಾಸ್ತುಶಿಲ್ಪ, ಮೂರ್ತಿಶಿಲ್ಪದಲ್ಲಿ ಮಾತ್ರ ವ್ಯಕ್ತವಾಗಲಿಲ್ಲ. ಈ ಪರಂಪರೆಯು ವರ್ಣಚಿತ್ರ, ಸಂಗೀತ ಮುಂತಾದ ಲಲಿತಕಲೆಗಳಲ್ಲಿಯೂ ಅಷ್ಟೇ ಸುಕೋಮಲವಾಗಿ, ಭವ್ಯವಾಗಿ ಬೆಳೆದುಬಂದಿದೆ. ಆದರೆ ಈ ಕ್ಷೇತ್ರಗಳಲ್ಲಿ ಅನೂಚಾನವಾಗಿ ಬೆಳೆದುಬಂದುದರ ಗುರುತುಗಳು ಅಷ್ಟೇ ಪ್ರಮಾಣದಲ್ಲಿ ಇತಿಹಾಸದ ಉದ್ದಕ್ಕೂ ಸಿಕ್ಕಿಲ್ಲ. ವರ್ಣಚಿತ್ರಗಳಂತೂ ಅಲ್ಲೊಂದು ಇಲ್ಲೊಂದು ದೊರಕಿವೆ. ಇವುಗಳ ಬಗ್ಗೆ ಅನೇಕರಿಗೆ ಏನೂ ಗೊತ್ತಿಲ್ಲ. ಶೋಧನೆಯಾಗಲಿ, ವಿಮರ್ಶೆಯಾಗಲಿ, ಆಗಬೇಕಾದ ಪ್ರಮಾಣದಲ್ಲಿ ನಡೆದಿಲ್ಲ. ಇತ್ತೀಚೆಗೆ, ಕರ್ನಾಟಕದಲ್ಲಿ ಅಲ್ಲಲ್ಲಿ ಇರುವ ಬೇರೆ ಬೇರೆ ಕಾಲದ ವರ್ಣಚಿತ್ರಗಳ ಬಗ್ಗೆ ಒಂದು ಉತ್ತಮ ವಿಮರ್ಶಾತ್ಮಕ ಗ್ರಂಥವನ್ನು ಕಲಾಕಾರನ ದೃಷ್ಟಿಯಿಂದ ಪ್ರಸಿದ್ಧ ಸಾಹಿತಿಯೂ ಕಲಾತಜ್ಞರೂ ಆದ ಡಾ. ಶಿವರಾಮಕಾರಂತರು ಪ್ರಥಮವಾಗಿ ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಅವರ ಗ್ರಂಥದಲ್ಲಿ ಯುರೋಪ್ ಮತ್ತು ಆಫ್ರಿಕಾ ಖಂಡಗಳ ಮತ್ತು ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ವರ್ಣ ಚಿತ್ರಗಳ ಒಂದು ಸ್ವಾರಸ್ಯಕರವಾದ ಪಕ್ಷಿನೋಟದ ಹಿನ್ನೆಲೆಯೊಡನೆ ಕರ್ನಾಟಕದ ಇತಿಹಾಸ ಕಾಲದ ಅಂದರೆ ಬಾದಾಮಿ ಚಾಲುಕ್ಯರ ಕಾಲದಿಂದ 19ನೇ ಶತಮಾನದವರೆಗಿನ ಕೆಲವು ಉತ್ತಮ ನಿದರ್ಶನಗಳೊಂದಿಗೆ ಚಿತ್ರಕಲೆಯ ವಿಮರ್ಶೆಯಿದೆ.

ಪ್ರಾಕ್ತನ ಶಾಸ್ತ್ರಜ್ಞರು ಈಗ ಸುಮಾರು 100 ವರ್ಷಗಳಿಂದಲೂ ಉತ್ತರ ಕರ್ನಾಟಕದಲ್ಲಿ ಆಗಾಗ್ಗೆ ಕೆಲವು ಸ್ವಾರಸ್ಯಕರವಾದ ಪ್ರಾಗೈತಿಹಾಸಿಕ ವರ್ಣಚಿತ್ರಗಳನ್ನು ಶೋಧಿಸಿದ್ದಾರೆ. ಆದರೆ ಇವುಗಳ ಕೂಲಂಕಷ ಅಭ್ಯಾಸ ಇನ್ನೂ ಆಗಿಲ್ಲ. ಪ್ರಸ್ತುತ ಇವುಗಳ ವಿಮರ್ಶಾತ್ಮಕ ಪರಿಚಯ ಮಾಡಿಕೊಡುವುದೇ ಈ ಪುಸ್ತಕದ ಉದ್ದೇಶ. ಇಂತಹ ಚಿತ್ರಕಲೆಯಲ್ಲಿ ಗವಿಗಳಲ್ಲಿ ಬಂಡೆಗಳ ಮೇಲೆ ಬಿಡಿಸಿದ ಚಿತ್ರಗಳು ಒಂದು ಪ್ರಕಾರದವು. ಪ್ರಪಂಚದ ಹಲವಾರು ಭಾಗಗಳಲ್ಲಿ ಪ್ರಾಗೈತಿಹಾಸಿಕ ಹಾಗೂ ಇತಿಹಾಸ ಕಾಲದ ವರ್ಣಚಿತ್ರ ಗವಿಗಳು, ಕಲ್ಲಾಸರೆಗಳು ಮತ್ತು ಬಯಲು ಬಂಡೆ ಚಿತ್ರಗಳು ಅಸಂಖ್ಯಾತವಾಗಿ ಬೆಟ್ಟಗುಡ್ಡಗಳಲ್ಲಿವೆ. ಆದರೆ ಜನಪದ ಸಾಹಿತ್ಯದ ಸ್ಥಿತಿಯಂತೆ, ಇತ್ತೀಚಿನವರೆಗೂ ಇದರ ಕಡೆಗೆ ತಜ್ಞರ, ಚಿತ್ರಕಲಾಭಿಮಾನಿಗಳ ಗಮನ ಹರಿದಿರಲಿಲ್ಲ.

ಸುಮಾರು 18ನೇ ಶತಮಾನದಿಂದೀಚೆಗೆ ಆಗಾಗ್ಗೆ ಅಪರೂಪವಾಗಿ ಅಲ್ಲೊಂದು ಇಲ್ಲೊಂದು ಇಂಥ ಕಲಾಕೃತಿಗಳ ಅವಶೇಷಗಳು ಮೊದಮೊದಲು ಆಕಸ್ಮಿಕವಾಗಿ ಕ್ರಮೇಣ ಕ್ರಮಬದ್ಧ ವೈಜ್ಞಾನಿಕ ಅನ್ವೇಷಣೆ, ಉತ್ಖನನಗಳಿಂದ ಶೋಧವಾದವು. ತತ್ಪರಿಣಾಮವಾಗಿ ಆಫ್ರಿಕಾ, ಏಷ್ಯಾ ಮತ್ತು ಯುರೋಪ ಹಾಗೂ ಸ್ವಲ್ಪಮಟ್ಟಿಗೆ ಆಸ್ಟ್ರೇಲಿಯಾ ಖಂಡಗಳ ನೂರಾರು ಪ್ರದೇಶಗಳಲ್ಲಿ ಇಂಥ ಕಲಾಕೃತಿಗಳ ನೆಲೆಗಳಿರುವುದು ತಿಳಿಯಿತು. ಇವು ಇನ್ನೂ ಶೋಧವಾಗುತ್ತಲೇ ಇವೆ. ವಿಶ್ವದ ಹಲವಾರು ಭಾಗಗಳಲ್ಲಿ ಇವುಗಳ ಅಧ್ಯಯನ ನಡೆಯುತ್ತಲಿದ್ದು, ನೂರಾರು ಉದ್ಗ್ರಂಥಗಳು ಲೇಖನಗಳು ಪ್ರಕಟವಾಗಿವೆ.

ಇಂಥ ವರ್ಣಚಿತ್ರಗಳ ಸೌಂದರ್ಯ ಹಾಗೂ ಮಹತ್ವ ಅರಿವಾಗುತ್ತಿರುವುದರಿಂದ ಈಗೀಗ ಅವುಗಳ ಶೋಧನೆ, ಅಭ್ಯಾಸದಲ್ಲಿ ಆಸಕ್ತಿ ಹೆಚ್ಚುತ್ತಿದೇ, ತೀವ್ರ ಪ್ರಗತಿ ಕಾಣುತ್ತಿದೆ. ಈ ರೀತಿಯ ಅಧ್ಯಯನವು ಆರಂಭವಾದ ಕಥೆ ಸ್ವಾರಸ್ಯಕರವಾಗಿಯೇ ಇದೆ. ಇದನ್ನು ಹಿನ್ನೆಲೆಯಾಗಿಟ್ಟುಕೊಂಡು ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಕಾಲದ ಈ ಚಿತ್ರಗಳ ಒಂದು ಸ್ಥೂಲ ಪರಿಚಯವನ್ನು ಮುಂದೆ ನೀಡಲಾಗಿದೆ.

1837ರಲ್ಲಿ ಸರ್ ಜಾರ್ಜ್ ಗ್ರೇ ಅವರಿಂದ ಸಿಡ್ನಿ(ಆಸ್ಟ್ರೇಲಿಯಾ) ವರ್ಣಚಿತ್ರ ಗವಿಗಳ ಶೋಧನೆ ಪ್ರಪ್ರಥಮವಾದರೂ ಬಹುಶಃ 1879ರ ಅಲ್ತಮಿರ (ಸ್ಪೇನ್)ದಲ್ಲಿಯ ವರ್ಣಚಿತ್ರಿತ ಗವಿಗಳ ಶೋಧನೆ ಹಾಗೂ ಬಂಡೆ–ಗವಿ ಚಿತ್ರಗಳ ಶೋಧನೆ ಇತಿಹಾಸದಲ್ಲಿಯೇ ವಿಶೇಷವಾದುದು ಸ್ವಾರಸ್ಯಕರವಾದುದು. 1875ರಲ್ಲಿ ಒಬ್ಬ ಹವ್ಯಾಸಿ ಪುರಾತತ್ವ ಶೋಧಕನೂ ಅಲ್ತಮಿರ ನೆರೆಯ ಪ್ರದೇಶದ ಭೂ ಒಡೆಯನೂ ಆದ ಡಾಸೆ ಮಾರ್ಸೆಲಿನೊದ ಸೌತ್ ಪೊಲ ಅವನು ಅಲ್ತಮಿರ ಗವಿಯಲ್ಲಿ ಕಪ್ಪುಬಣ್ಣದ ಅಂಚಿನ ಚಿತ್ರಗಳನ್ನು ನೋಡಿದ್ದನು. ಆದರೆ ಆಗ ಅವನಿಗೆ ಅವು ಅಷ್ಟೇನೂ ಮಹತ್ವದ್ದಾಗಿ ಕಾಣಲಿಲ್ಲ; ಪ್ರಾಗೈತಿಹಾಸಿಕ ಕಾಲದ್ದೆಂದೂ ಅನ್ನಿಸಲಿಲ್ಲ. ಅನಂತರ 1878ರಲ್ಲಿ ಪ್ಯಾರಿಸ್ಸಿನಲ್ಲಿ ಒಂದು ಪುರಾತತ್ವ ಪ್ರದರ್ಶನವನ್ನು ನೋಡಿದನು. ಅಲ್ಲಿ ದೋರ್ದೋರ್ಜ್ಞೆ(ಫ್ರಾನ್ಸ್) ದಲ್ಲಿಯ ಒಂದು ಕಲ್ಲಾಸರೆಯಲ್ಲಿ ದೊರೆತ ಪ್ರಾಗೈತಿಹಾಸಿಕ ಕಾಲದ ಬೇಟೆಯಾಡುವ ಜನವರ್ಗದ ಆಯುಧಗಳು ಮತ್ತು ಊರಿ ಬಿಡಿಸಿದ ರೇಖಾಚಿತ್ರಗಳನ್ನುಳ್ಳ ಉಪಕರಣಗಳು ಅವನನ್ನು ಆಕರ್ಷಿಸಿದವು. ತನ್ನ ಪ್ರಾಂತಕ್ಕೆ ಹಿಂದಿರುಗಿದ ಮೇಲೆ ಅವನು ಹೆಚ್ಚಿನ ಉತ್ಸಾಹದಿಂದ, ತಿಳಿವಳಿಕೆಯಿಂದ ತಾನು ಹಿಂದೆ ನೋಡಿದ್ದ ಗವಿಗಳನ್ನು ಮತ್ತೆ ಶೋಧಿಸಲು ಆರಂಭಿಸಿದನು. ಆ ಸಮಯದಲಿ ಆ ಅಪರೂಪ ಚಿತ್ರಗಳ ಶೋಧನೆಯು ಒಂದು ಕಥೆಯೇ ಸರಿ. ಅನ್ವೇಷಣೆಯ ಕಾಲದಲ್ಲಿ ಅವನ ಚಿಕ್ಕ ಮಗಳು ಜೊತೆಗಿದ್ದಳು. ಒಮ್ಮೆ ಅವನು ಗವಿಯ ಪ್ರದೇಶದ ಭಾಗದಲ್ಲಿ ಅಗೆಯುತ್ತಿರುವಾಗ ಆ ಹುಡುಗಿಯು ಸಹಜವಾಗಿ ಹುಡುಗಾಟಿಕೆಯಿಂದ ಬಂಡೆಯ ಮೇಲೆ ಬರೆದ ಗೂಳಿಗಳ ಚಿತ್ರಗಳನ್ನು (ಚಿತ್ರ 3) ನೋಡಿ ಆಶ್ಚರ್ಯದಿಂದ "ತೋರೊ,

ತೋರೊ.... (ಗೂಳಿಗಳು) ಎಂದು ಕೂಗಿಕೊಂಡಳು. ಕೂಡಲೇ ತಂದೆಯೂ ಗವಿಯೊಳಗೆ ಹೋಗಿ ಆ ಕುತೂಹಲಕಾರಿಯಾದ ದೊಡ್ಡ ದೊಡ್ಡ ಬಲಿಷ್ಠ ಕೋಣಗಳ ಚಿತ್ರಗಳನ್ನು ನೋಡಿ ಪುಳಕಿತನಾದನು. ತನ್ನ ಅಗೆತದಲ್ಲಿ ದೊರೆತ ಕಲ್ಲಿನ ಉಪಕರಣಗಳನ್ನು ಮಾಡಿದ ಜನರೆ ಆ ಚಿತ್ರಗಳನ್ನೂ ಬಿಡಿಸಿರುವರೆಂದು ತರ್ಕಿಸಿ, ಅವುಗಳ ಬಗೆಗೆ 1880ರಲ್ಲಿ ಒಂದು ಲೇಖನವನ್ನು (ಬ್ರೀಫ್ ನೋಟ್ಸ್ ಅನ್ ಸಮ್ ಪ್ರಿ ಹಿಸ್ಟಾರಿಕ್ ಆಬ್ಜಕ್ಟ್ಸ ಆಫ್ ದಿ ಪ್ರಾವಿನ್ಸ್ ಆಫ್ ಸಂತದರೆಷಿ) ಪ್ರಕಟಿಸಿದನು. ಆದರೆ ಅವನಿಗೆ ನಿರಾಶೆ ಕಾದಿತ್ತು. ಗತಕಾಲದ ಸಸ್ಯ, ಪ್ರಾಣಿ ಪಡಿಯಚ್ಚು ಶಾಸ್ತ್ರದಲ್ಲಿ ನಿಷ್ಣಾತನಾದ ಫ್ರೆಂಚ್ ಶಾಸ್ತ್ರಜ್ಞನೊಬ್ಬನು, ಆ ಚಿತ್ರಗಳು ಪ್ರಾಗೈತಿಹಾಸಿಕ ಕಾಲದ್ದಲ್ಲವೆಂದು ವಾದಿಸಿದನು. ಇತರ ಪುರಾತತ್ವ ಶಾಸ್ತ್ರಜ್ಞರೂ ಇವನ ಅಭಿಪ್ರಾಯವನ್ನು ಅನುಮೋದಿಸಿದರು. ಅವೆಲ್ಲ ಯಾರೋ ಕಲಾಭ್ಯಾಸಿ ಹುಡುಗರು ಇಲ್ಲ ರೋಮ್ ದೇಶದ ಸೈನಿಕ ತುಕಡಿಗಳು ಅಲ್ಲೆಲ್ಲಾದರೂ ಬಿಡಾರ ಮಾಡಿದ್ದಾಗ ಈ ಚಿತ್ರಗಳನ್ನು ಬಿಡಿಸಿದ್ದಿರಬೇಕೆಂದು ಊಹಿಸಿದರು. ಇದು ಅಷ್ಟಕ್ಕೆ ನಿಲ್ಲಲಿಲ್ಲ. ಮೊರ್ಸಲಿನೊ ಅವುಗಳನ್ನು ತಾನೆ ಬಿಡಿಸಿ ಪ್ರಾಗೈತಿಹಾಸಿಕ ಕಾಲದ್ದೆಂದು ಹೇಳಿ ಪಂಡಿತರನ್ನು ಮೋಸಗೊಳಿಸುತ್ತಿರುವನೆಂದು ಸಂಶಯಪಟ್ಟರು. ಬಹುಶಃ ಈ ತಜ್ಞರು ತಮ್ಮ ದೇಶದ ದೋರ್ದೋಜ್ಞಯ ಶೋಧನೆಗಳ ಹಿರಿಮೆಯು ಮೇಲುಗೈಯಾಗಿರಬೇಕೆಂದು ಪಕ್ಷಪಾತ ಬುದ್ಧಿಯಿಂದ ಕ್ರಮಬದ್ಧವಾಗಿ ಮಾರ್ಸಲಿನೊನ ಶೋಧನೆಗಳನ್ನು ಆ ರೀತಿ ಅವಹೇಳನ ಮಾಡಿದರೆಂಬ ಅಭಿಪ್ರಾಯವಿದೆ. ಆದರೆ ಸತ್ಯವನ್ನು ಬಹುಕಾಲ ಮುಚ್ಚಿಡಲು ಸಾಧ್ಯವಿಲ್ಲ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಫ್ರಾನ್ಸ್‌ನಲ್ಲಿಯೂ ಅಲ್ತಮಿರ ತರಹದ ಶಿಲಾಯುಗದ ವರ್ಣಚಿತ್ರಗಳು ಶೋಧಿಸಲ್ಪಟ್ಟವು. ಇವುಗಳಲ್ಲಿ ಕಾಣುಕೋಣ, ದೊಡ್ಡ ಗಾತ್ರದ ಜಿಂಕೆ, ಖಡ್ಗಮೃಗಗಳ ಚಿತ್ರಗಳಿದ್ದವು. ಅಲ್ತಿಮಿರ ಚಿತ್ರಗಳಿಗೆ ಬಹುಮಟ್ಟಿಗೆ ಹೋಲುತ್ತಿದ್ದವು. ಆದ್ದರಿಂದ ತಜ್ಞರು ಅನಿವಾರ್ಯವಾಗಿ ಅಲ್ತಮಿರ ಚಿತ್ರಗಳ ಕಡೆಗೆ ಮತ್ತೆ ಗಮನ ಹರಿಸಬೇಕಾಯಿತು. ಎಮಿಲೆ ಕಾರ್ಥೈಲ್ಯಾಕ್ ಮತ್ತು ಹೆನ್ರಿ ಬ್ರಾಲ್ ಅವರುಗಳು 1901ರಲ್ಲಿ ಅಲ್ತಮಿರ ಚಿತ್ರಗಳನ್ನು ಮತ್ತೆ ಪರಿಶೀಲಿಸಿದರು. ಮಾರ್ಸಲಿನೋ ಅಭಿಪ್ರಾಯಗಳು ಸರಿಯೆಂದು ಹೇಳಿದರು. ಆದರೆ ಅಷ್ಟರೊಳಗೆ ಮಾರ್ಸಲಿನೋ ತೀರಿಕೊಂಡಿದ್ದರು. ಈಗ ಅಲ್ತಮಿರ ವರ್ಣಚಿತ್ರಗಳಿಗೆ ಜಗತ್ಪ್ರಸಿದ್ಧವಾಗಿದೆ. ಭೌತಿಕ ವಿಜ್ಞಾನಿಗಳ ಶೋಧನೆಯ ಇತಿಹಾಸದಲ್ಲಿದ್ದಂತೆಯೇ ಈ ಕ್ಷೇತ್ರದಲ್ಲಿಯೂ ಅಪರೂಪವಾಗಿ ಶೋಧಕರು ಸತ್ಯವನ್ನು ಅರಿತು ಹೇಳಿದರೂ ಮೊದಮೊದಲು ನಿಂದನೆ, ಕಟು ಟೀಕೆಗಳನ್ನು ಎದುರಿಸಬೇಕಾಯಿತು.

ಲ್ಯಾಸ್ಕೊ(ದೋರ್ದೋಜ್ಞೆ ವಿಭಾಗ, ಫ್ರಾನ್ಸ್) ಎಂಬಲ್ಲಿಯೂ ಆಕಸ್ಮಿಕವಾಗಿಯೇ ವರ್ಣಚಿತ್ರ ಗವಿಗಳು ಬೆಳಕಿಗೆ ಬಂದವು. ಮೊಂತಿಜ್ಞೆ ನಗರದ ಬಳಿ ವೆಜಿರೆ ನದಿ ದಂಡೆಯ ಕುರುಚಲು ಗಿಡಗಳಿಂದ ತುಂಬಿದ ಬೆಟ್ಟದ ಮೇಲೆ ಹುಡುಗರ ಗುಂಪೊಂದು ತಿರುಗಾಡುತ್ತಿದ್ದಾಗ ಅವರ

ನಾಯಿ ಒಂದು ಗುಂಡಿಯಲ್ಲಿ ಬಿತ್ತು. ಅದನ್ನು ಎತ್ತುವುದಕ್ಕೋಸ್ಕರ ಒಬ್ಬ ಹುಡುಗ ಗುಂಡಿಯೊಳಗೆ ಇಳಿದ. ಅವನಿಗೆ ಪರಮಾಶ್ಚರ್ಯ ಕಾದಿತ್ತು. ತಾನು ಇಳಿದಿದ್ದು ಒಂದು ಗವಿ. ಗವಿ ತುಂಬ ಶುಭ್ರ ವರ್ಣಚಿತ್ರಗಳು. ಇದರ ಸಮೀಪದಲ್ಲಿಯೇ ಅತ್ಯಂತ ಹಳೆಯ ಶಿಲಾಯುಗದ ಮಾದರಿಯ ನೆಲೆಗಳು ಲ ಮಸ್ತೀರ್, ಕ್ರೊ ಮ್ಯಾಗ್ನ ಮೊದಲಾದೆಡೆಗಳಲ್ಲಿವೆ. ಈ ಆಕಸ್ಮಿಕ ಘಟನೆ ನಡೆದದ್ದು 1940ರಲ್ಲಿ. ಇದು ಇಂತಹ ವರ್ಣಚಿತ್ರಗಳ ಶೋಧನೆಗೆ ಪುಟಕೊಟಿತು. ಪುರಾತತ್ವಜ್ಞರಲ್ಲಿ ಇವುಗಳ ಬಗೆಗೆ ಆಸಕ್ತಿ ಕೂತೂಹಲ ಬಲವಾಯಿತು. ಕ್ರಮಬದ್ಧ ಅನ್ವೇಷಣೆಗೆ ಎಡೆ ಮಾಡಿಕೊಟ್ಟಿತು. ಹೀಗೆಯೇ ಆಸ್ಟ್ರೇಲಿಯಾ, ಆಫ್ರಿಕಾ, ಜರ್ಮನಿ, ಇಂಗ್ಲೆಂಡ್, ಭಾರತ, ರಷ್ಯಾ, ಜಪಾನ್ ಮೊದಲಾದ ಖಂಡ/ರಾಷ್ಟ್ರಗಳಲ್ಲಿ ಇಂತಹ ವರ್ಣ ಹಾಗೂ ಬಂಡೆ ಚಿತ್ರಗಳು ಶೋಧನೆಯಾದವು, ಆಗುತ್ತಲಿವೆ. ಜೊತೆಗೆ ಇವುಗಳ ವೈಜ್ಞಾನಿಕ ಅಧ್ಯಯನವೂ ನಡೆಯುತ್ತಲಿದೆ. ಅತಿ ಪ್ರಾಚೀನ ಕಾಲದಿಂದಲೂ ಅಂದರೆ ಕನಿಷ್ಟ ಸುಮಾರು 40,000 ವರ್ಷಗಳಿಂದ ಇತ್ತೀಚಿನವರೆಗೂ ಉಳಿದುಕೊಂಡು ಬಂದ ಈ ಚಿತ್ರಕಲೆಯು ಪ್ರಪಂಚದ ನಾನಾ ಭಾಗಗಳಲ್ಲಿ ವಿವಿಧ ಜನಾಂಗಗಳ ಕಲೆಯನ್ನಲ್ಲದೆ ಅವರ ವೈವಿಧ್ಯಮಯ ಹಲವಾರು ಭಾವನೆ, ನಂಬಿಕೆ, ಕಟ್ಟಳೆಗಳನ್ನು ಪ್ರತಿಬಿಂಬಿಸುವ ಅಮೂಲ್ಯ 'ದೃಶ್ಯ ಸ್ಮಾರಕ'ಗಳೆಂದು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಅರಿಯಲಾಗಿದೆ. ಆದ್ದರಿಂದ ಇವುಗಳ ಶೋಧನೆ, ಅಧ್ಯಯನ, ರಕ್ಷಣೆ ಮತ್ತು ಪ್ರಕಟಣೆಗೋಸ್ಕರ 1964 ಆಗಸ್ಟ್ 3ರಂದು ಇಟಲಿಯ ಕಸದಿಪೊಂತ (ಬ್ರೇಸಿಯ ಪ್ರಾಂತ) ಎಂಬಲ್ಲಿ 'ಸೆಂತ್ರೊ ಕಮ್ಯೂನೊ ದಿ ಸ್ಟುಡಿ ಪ್ರಿ ಹಿಸ್ಟಾರಿಚಿ ವಾಲ್ಕಮೊನಿಕ ಎಂಬ' ಒಂದು ಅಂತರ್‌ರಾಷ್ಟ್ರೀಯ ಸಂಶೋಧನ ಸಂಸ್ಥೆಯನ್ನು ತೆರೆಯಲಾಯಿತು. ಈ ಸಂಸ್ಥೆಯು ವಾಲ್ಕಮೊನಿಕ ಬೆಟ್ಟದಲ್ಲಿಯ ಸುಮಾರು 1,30,000 ಬಂಡೆ ಚಿತ್ರಗಳನ್ನು ಶೋಧಿಸಿ, ವಿಶ್ಲೇಷಿಸಿ ಪ್ರಕಟಿಸಿದೆ. 1980ರಲ್ಲಿ ಸಾಂಸ್ಕೃತಿಕ ಸ್ಮಾರಕಗಳು ಮತ್ತು ನೆಲೆಗಳಿಗೆ ಸಂಬಂಧಪಟ್ಟ ಅಂತರ್‌ರಾಷ್ಟ್ರೀಯ ಪರಿಷತ್ತು, ಗವಿ ಮತ್ತು ಬಂಡೆ ಚಿತ್ರಗಳ ಶೋಧನೆ, ಅಧ್ಯಯನ ರಕ್ಷಣೆಗೆ ಸಂಬಂಧಪಟ್ಟಂತೆ ಒಂದು ಅಂತಾರಾಷ್ಟ್ರೀಯ ಸಮಿತಿಯನ್ನು ರಚಿಸಿದೆ. ಸಧ್ಯಕ್ಕೆ ಪ್ರಪಂಚದ ನಾನಾ ಭಾಗಗಳಲ್ಲಿ ಈ ಚಿತ್ರಕಲೆಯ ಅಧ್ಯಯನವನ್ನು ಕೈಗೊಂಡಿರುವ ತಜ್ಞರ ಮತ್ತು ಅವರ ಸಂಶೋಧನೆ ಬಗೆಗೆ ವಿಷಯಗಳನ್ನು ಸಂಗ್ರಹಿಸುತ್ತಿದೆ. ಇದಲ್ಲದೆ ವಿಶ್ವ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ವಿಭಾಗವು ಈ ಚಿತ್ರಕಲೆಯ ಅಧ್ಯಯನ ಹಾಗೂ ರಕ್ಷಣೆ ವಿಷಯದಲ್ಲಿ ಆಸಕ್ತಿ ವಹಿಸಿದೆ. ಆಫ್ರಿಕಾ, ಅಮೆರಿಕಾ, ಏಷ್ಯಾ ಮತ್ತು ಯುರೋಪ್ ಖಂಡಗಳಲ್ಲಿಯ ಹಲವಾರು ಮಹತ್ವದ ಚಿತ್ರಕಲೆಯ ನೆಲೆಗಳನ್ನು ವಿಶ್ವದ ಆಸ್ತಿಯೆಂದು ಘೋಷಿಸಿ, ಅವುಗಳ ರಕ್ಷಣೆಯ ಹೊಣೆಯನ್ನು ತಾನು ಹೊತ್ತಿದೆ. ಹೀಗೆ ಕಳೆದ ಶತಮಾನದಲ್ಲಿ ಅಲ್ಲೊಂದು ಇಲ್ಲೊಂದು ಆಕಸ್ಮಿಕ ಶೋಧನೆಗಳಿಂದ ಪ್ರಾರಂಭವಾದ ಈ ಚಿತ್ರಕಲೆಯ ಅಧ್ಯಯನವು ಇಂದು ಅಂತಾರಾಷ್ಟ್ರೀಯ ಗಮನವನ್ನು ಸೆಳೆದಿದೆ; ಮಹತ್ವವನ್ನು ಹೊಂದಿದೆ.

ಹೀಗೆ ಈ ಚಿತ್ರಕಲೆಯ ಅಧ್ಯಯನವು ಗಣನೀಯವಾಗಿ ನಡೆದಿದೆ. ಆದರೆ ಇದುವರೆಗಿನ ಶೋಧನೆಗಳನ್ನು ಪರಿಶೀಲಿಸಿದಾಗ ದೇಶಾದ್ಯಂತ ಹಲವಾರು ಪಟ್ಟು ಇರುವ ಇಂಥ ಚಿತ್ರಕಲೆ ಸ್ಥಾನಗಳನ್ನು ಶೋಧಿಸಿ, ಅಧ್ಯಯನ ಮಾಡಬೇಕಾಗಿದೆಯೆಂಬುದು ಖಚಿತ. ಗಟ್ಟಿಮುಟ್ಟಾದ, ಕಷ್ಟಸಹಿಷ್ಣು, ಉತ್ಸಾಹಿ ತರುಣ ಸಂಶೋಧಕರು ಈ ಸ್ವಾರಸ್ಯಕರ ಮಹತ್ವದ ಆದರೆ ಕಷ್ಟಸಾಧ್ಯವಾದ ಸಂಶೋಧನೆಯನ್ನು ಕೈಗೊಳ್ಳಬೇಕಾದುದು ಅವಶ್ಯ.

## ಭಾರತದಲ್ಲಿ ಅಧ್ಯಯನ

ನಮ್ಮ ದೇಶದಲ್ಲಿಯೂ ಗವಿ ವರ್ಣ ಮತ್ತು ಬಂಡೆ ಚಿತ್ರಗಳ ಶೋಧನೆ ಆಕಸ್ಮಿಕವಾಗಿ ಅಲ್ಲಲ್ಲಿ 1880ರಿಂದ ಪ್ರಾರಂಭವಾಯಿತೆನ್ನಬಹುದು. ಹೂಬರ್ಟ್ ನಾಕ್ಸ್ ಬಳ್ಳಾರಿಯ ಸಮೀಪದಲ್ಲಿರುವ ಕುಪ್ಪಗಲ್ಲು ಗ್ರಾಮದಲ್ಲಿಯ ಗುಡ್ಡಗಳಲ್ಲಿ ದೊಡ್ಡ ದೊಡ್ಡ ಗುಂಡುಕಲ್ಲುಗಳ ಮೇಲೆ ಕುಟ್ಟಿ/ಗೀರಿ ಬಿಡಿಸಿದ ಚಿತ್ರಗಳನ್ನು ಸುಮಾರು 1880ರ ಸಮಯದಲ್ಲಿ ನೋಡಿ, ಅವುಗಳ ಛಾಯಾಚಿತ್ರವನ್ನು ತೆಗೆದು ರಾಬರ್ಟ್ ಬ್ರೂಸ್ ಫುಟ್ ಅವರಿಗೆ ಕಳುಹಿಸಿಕೊಟ್ಟರು. ಫುಟ್ ಅವರು 1916ರಲ್ಲಿ ಪ್ರಕಟಿಸಿದ ದಿ ಫುಟ್ ಕಲೆಕ್ಷನ್ ಆಫ್ ಇಂಡಿಯನ್ ಪ್ರೀ ಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್ ಪುಸ್ತಕದಲ್ಲಿ ಇವುಗಳ ವರ್ಣನೆಯನ್ನು ಕೊಟ್ಟಿದ್ದಾರೆ. ಈ ಚಿತ್ರಗಳ ಶೋಧನೆಯ ಸಮಯದಲ್ಲಿ ಉತ್ತರ ಭಾರತದಲ್ಲಿ ಆರ್ಚಿಬಾಲ್ಡ್ ಕಾರ್ಲೈಲ್ ಮತ್ತು ಜಾನ್ ಕಾಕ್‌ಬರ್ನ್ ಅವರುಗಳು ಮಿರ್ಜಾಪುರ(ಮಧ್ಯಪ್ರದೇಶ) ಬಳಿಯ ವಿಂಧ್ಯಪ್ರದೇಶದ ಕೈಮೂರ ಬೆಟ್ಟದಲ್ಲಿಯ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳನ್ನು ಕಂಡು 1880–83ರಲ್ಲಿ ಅವುಗಳ ಬಗೆಗೆ ಮೂರು ಲೇಖನಗಳನ್ನು ಪ್ರಕಟಿಸಿದರು. ಹೆಚ್ಚಾಗಿ 1901ರಿಂದ ಉತ್ತರ ಭಾರತದಲ್ಲಿ ಅಲ್ಲಲ್ಲಿ ಇಂತಹ ಗವಿ ವರ್ಣಚಿತ್ರಗಳು ಶೋಧವಾಗುತ್ತಲಿದ್ದವು. ಕರ್ನಾಟಕದಲ್ಲಿ 1935ರಲ್ಲಿ ಲಿಯೋನಾರ್ಡ್ ಮನ್ ಅವರು ಹಿರೆ ಬೆನಕಲ್ (ಗಂಗಾವತಿ ತಾಲ್ಲೂಕು, ರಾಯಚೂರು ಜಿಲ್ಲೆ) ಗುಡ್ಡಗಳಲ್ಲಿ ಸ್ವಾರಸ್ಯಕರವಾದ ಮೂರು ಗವಿ ವರ್ಣಚಿತ್ರಗಳನ್ನೂ ಸುಮಾರು ಅದೇ ಸಮಯದಲ್ಲಿ ಭಿಲ್ಲಮರಾಯನ ಗುಡ್ಡದಲ್ಲಿ ಕುಟ್ಟಿದ ಮತ್ತು ಗೀರು ಚಿತ್ರಗಳನ್ನೂ (bruisings & engravings) ಕಂಡು ಹಿಡಿದರು.

ಇಂತಹ ಚಿತ್ರಗಳ ಶೋಧನೆಯಲ್ಲಿ 1957 ಒಂದು ಮಹತ್ವದ ವರ್ಷವೆಂದೇ ಹೇಳಬಹುದು. ಉಜ್ಜಯಿನಿಯ (ಮಧ್ಯಪ್ರದೇಶ) ಡಾ. ವಿಷ್ಣು. ಎಸ್. ವಾಕಣ್‌ಕರ್ ಆಕಸ್ಮಿಕವಾಗಿ ಭೋಪಾಲ್‌ನಿಂದ ಸುಮಾರು 15 ಕಿ.ಮೀ. ಆಗ್ನೇಯಕ್ಕಿರುವ ಭೀಂಬೆಟ್ಕಾ ಗುಡ್ಡಗಾಡಿನಲ್ಲಿ ಅಪರೂಪದ ಗವಿ ವರ್ಣಚಿತ್ರಗಳನ್ನು ನೋಡಿದರು. ಇದಕ್ಕೂ ಮುಂಚೆ ಅವರು ಫ್ರಾನ್ಸ್–ಸ್ಪೇನ್ ದೇಶಗಳಲ್ಲಿ ಇಂತಹ ವರ್ಣಚಿತ್ರ ಶೋಧನೆಗಳ ಬಗೆಗೆ ತಿಳಿದಿದ್ದರು. ಆದ್ದರಿಂದ ಭೀಂಬೆಟ್ಕಾದ ಚಿತ್ರಗಳು ಅವರಲ್ಲಿ ಆ ವಿಷಯದಲ್ಲಿ ಆಸಕ್ತಿಯನ್ನು ಕೆರಳಿಸಿದವು. ಆ ಪ್ರದೇಶದಲ್ಲಿ ಕೂಲಂಕಷವಾಗಿ

ಅನ್ವೇಷಣೆ ಮಾಡಿದ ಪರಿಣಾಮವಾಗಿ ಅವರು ಪರೀಕ್ಷಿಸಿದ ಸುಮಾರು 754 ಕಲ್ಲಾಸರೆಗಳಲ್ಲಿ 500 ಇಂತಹ ಚಿತ್ರಗಳಿಂದ ತುಂಬಿದ್ದು ಕಂಡುಬಂದಿತು. ಅನಂತರ ಅದೇ ಗೀಳಿನಿಂದ ಇಂತಹ ಚಿತ್ರಗಳನ್ನು ಅರಸುತ್ತಾ ಭಾರತದ ಪ್ರದೇಶಗಳಲ್ಲಿ ತಿರುಗಾಡಿದರು. ಕರ್ನಾಟಕದ ಬಾದಾಮಿ ಮತ್ತು ಅದರ ಸಮೀಪದಲ್ಲಿಯ ಕೆಲವು ಮಹತ್ವದ ಚಿತ್ರಗಳನ್ನು ಶೋಧಿಸಿದರು. ಇವುಗಳ ಬಗೆಗೆ **ಪೆಂಟೆಡ್ ರಾಕ್ ಶೆಲ್ಟರ್ಸ್ ಆಫ್ ಇಂಡಿಯಾ** ಎಂಬ ಒಂದು ಪಿಎಚ್.ಡಿ. ಮಹಾಪ್ರಬಂಧವನ್ನು ಬರೆದರು. ಈ ಕ್ಷೇತ್ರದಲ್ಲಿಯ ಇವರ ಸೇವೆಯನ್ನು ಗಮನಿಸಿ ಭಾರತ ಸರ್ಕಾರವು 'ಪದ್ಮಶ್ರೀ' ಪ್ರಶಸ್ತಿಯನ್ನು ಇವರಿಗೆ ದಯಪಾಲಿಸಿತು. ಇತ್ತೀಚೆಗೆ ಮಧ್ಯಪ್ರದೇಶದಲ್ಲಿಯ ಇತರೆಡೆಗಳಲ್ಲಿ, ಉತ್ತರಪ್ರದೇಶ, ಗುಜರಾತ್, ರಾಜಸ್ಥಾನ, ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು ಮತ್ತು ಕೇರಳ ಪ್ರದೇಶಗಳಲ್ಲಿ ನೂರಾರು ಇಂತಹ ಚಿತ್ರಗಳು ಬೆಳಕಿಗೆ ಬಂದಿವೆ. ಉತ್ತರ ಭಾರತದಲ್ಲಿಯೇ ಸುಮಾರು 5000ಕ್ಕೂ ಮಿಕ್ಕಿ ಇಂತಹ ನೆಲೆಗಳನ್ನು ಕಂಡು ಹಿಡಿಯಲಾಗಿದೆ.

ಬಹುಶಃ ಇಂತಹ ಗವಿ ವರ್ಣಚಿತ್ರಗಳ ಸಂಖ್ಯಾ ದೃಷ್ಟಿಯಿಂದ ಈಗ ಭಾರತವೇ ವಿಶ್ವದಲ್ಲಿ ಮೊದಲನೆಯದು ಎಂದು ತೋರುತ್ತದೆ. ಉತ್ತರಭಾರತದಲ್ಲಿ ಇವುಗಳ ಅಧ್ಯಯನ ಹೆಚ್ಚು ಭರದಿಂದ ಸಾಗುತ್ತಿದೆ. ಇವುಗಳನ್ನು ಕುರಿತು ಮತ್ತೆ ಎರಡು ಪಿ.ಎಚ್‌ಡಿ. ಮಹಾಪ್ರಬಂಧಗಳು ಬಂದಿವೆ. ಸುಮಾರು ಒಂದು ದಶಕ ವರ್ಷಗಳಿಂದೀಚೆಗೆ **ಸ್ಟೋನ್ ಏಜ್ ಪೈಂಟಿಂಗ್ಸ್ ಇನ್ ಇಂಡಿಯನ್ (ವಿ.ಎಸ್. ವಾಕಣಕರ್ ಮತ್ತು ರಾಬರ್ಟ್ ಬ್ರೂಕ್ಸ್) ಮತ್ತು ಪ್ರಿ ಹಿಸ್ಟಾರಿಕ್ ಇಂಡಿಯನ್ ರಾಕ್ ಪೈಂಟಿಂಗ್ಸ್** (ಇರ್ವಿನ್ ನ್ಯೂ ಮೇಯರ್) ಎಂಬ ಪುಸ್ತಕಗಳು ಪ್ರಕಟವಾಗಿವೆ. 1981 ನವೆಂಬರ್‌ನಲ್ಲಿ ಮಧ್ಯಪ್ರದೇಶ ಸರ್ಕಾರದ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಶಾಖೆಯು ಭೋಪಾಲ್‌ನಲ್ಲಿ ಗವಿವರ್ಣ ಬಂಡೆ ಚಿತ್ರಗಳ ಶೋಧನೆಯ ಶತಮಾನೋತ್ಸವದ ಅಂಗವಾಗಿ 'ರಾಕ್ ಪೈಂಟಿಗ್ಸ್ ಇನ್ ಇಂಡಿಯಾ' ಎಂಬ ವಿಷಯದ ಮೇಲೆ ಒಂದು ರಾಷ್ಟ್ರೀಯ ವಿಚಾರ ಸಂಕಿರಣವನ್ನು ಏರ್ಪಾಡಿಸಿದ್ದಿತು. ಇದರಲ್ಲಿ ಮಂಡಿಸಿದ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ದೆಹಲಿಯ 'ಇಂದಿರಾಗಾಂಧಿ ನ್ಯಾಶನಲ್ ಸೆಂಟರ ಫಾರ್ ದಿ ಆರ್ಟ್ಸ್' ಎಂಬ ಪ್ರತಿಷ್ಠಿತ ಸಂಸ್ಥೆಯು ಭಾರತದಲ್ಲಿಯ ಬಂಡೆ ಮತ್ತು ಗವಿ ವರ್ಣಚಿತ್ರಗಳ ವಿಶೇಷ ಅಧ್ಯಯನವನ್ನು ಕೈಗೊಂಡಿದೆ. ಈ ಅಧ್ಯಯನದಲ್ಲಿ ಅತ್ಯಂತ ಆಧುನಿಕ ತಂತ್ರ ಮತ್ತು ಕ್ರಮಗಳನ್ನು ಬಳಸುವುದಕ್ಕೋಸ್ಕರ ದಿನಾಂಕ 9 ರಿಂದ 11 ಡಿಸೆಂಬರ್ 1991ರಲ್ಲಿ ಒಂದು ಕಮ್ಮಟವನ್ನು ಏರ್ಪಡಿಸಿತ್ತು. ಇದರಲ್ಲಿ ಭಾರತ ಬಂಡೆ ಮತ್ತು ಗವಿ ವರ್ಣಚಿತ್ರಕಲೆಯ ಮೇಲೆ ಎರಡು ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಿದ್ದು ದಕ್ಷಿಣ ಭಾರತದ ಚಿತ್ರಕಲೆಯ ಬಗ್ಗೆ ಉಪನ್ಯಾಸವನ್ನು ಕೊಡಲು ನನಗೆ ಅವಕಾಶ ಒದಗಿಸಿತು. ಅನಂತರ ಈ ಸಂಸ್ಥೆಯು 1992ರಲ್ಲಿ ಈ ವಿಷಯದ ಮೇಲೆ ಒಂದು ಸುದೀರ್ಘ ಅಂತರ್‌ರಾಷ್ಟ್ರೀಯ ವಿಚಾರ ಸಂಕಿರಣವನ್ನು ಏರ್ಪಡಿಸಿ ಅದರಲ್ಲಿ ಮಂಡಿಸಿದ ವಿದ್ವತ್ಪತ್ರಿಕೆಗಳನ್ನು ಸಂಗ್ರಹಿಸಿ 1993ರಲ್ಲಿ ಆ ಗ್ರಂಥವನ್ನು

ಪ್ರಕಟಿಸಿದೆ. ಶ್ರೀಶೈಲದಲ್ಲಿಯ ತೆಲುಗು ವಿಶ್ವವಿದ್ಯಾಲಯದ ಶ್ರೀ ಚಂದ್ರಮೌಳಿಯವರು ಆಂಧ್ರಪ್ರದೇಶದಲ್ಲಿ ಇದುವರೆಗೂ ಶೋಧಿಸಲಾದ ಚಿತ್ರಗಳ ಮೇಲೆ ಒಂದು ಪಿಎಚ್.ಡಿ. ಮಹಾಪ್ರಬಂಧವನ್ನು ತಮ್ಮ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದರು. ಇರ್ವಿನ್ ನ್ಯೂ ಮೇಯರ್ ಅವರ ಇನ್ನೊಂದು ಪುಸ್ತಕ: ಲೈನ್ಸ್ ಆನ್ ಸ್ಟೋನ್ (1994) ಗಮನಾರ್ಹ.

ಭಾರತದಲ್ಲಿ ಇಂಥ ಅಧ್ಯಯನ, ಶೋಧನೆಗಳನ್ನು ಒಂದೆಡೆಯಲ್ಲಿ ಚರ್ಚಿಸಲು ಭಾರತದಲ್ಲಿ ಎರಡು ಸಂಸ್ಥೆಗಳು ಹುಟ್ಟಿಕೊಂಡಿವೆ. ಅವು 'ರಾಕ್ ಆರ್ಟ್ ಸೊಸೈಟಿ ಆಫ್ ಇಂಡಿಯಾ' ಮತ್ತು 'ಇಂಡಿಯನ್ ರಾಕ್ ಆರ್ಟ್ ರಿಸರ್ಚ್ ಅಸೋಸಿಯೇಷನ್', ಸಗರ.

ಮೊದಲನೆಯದು ಪುರಾಕಲಾ ಎಂಬ ಒಂದು ನಿಯತಕಾಲಿಕೆಯನ್ನು ಕೂಡ ಪ್ರಕಟಿಸುತ್ತಿದೆ. ಇದೇ ವರ್ಷ ಡಿಸೆಂಬರ್ 4ರಿಂದ 11ರವರೆಗೆ ದೆಹಲಿಯಲ್ಲಿ 'ವರ್ಲ್ಡ್ ಆರ್ಕಿಯಾಲಜಿ ಕಾಂಗ್ರೆಸ್ ಎಂಬ ಒಂದು ಅಂತರ್‌ರಾಷ್ಟ್ರೀಯ ಸಮ್ಮೇಳನವೂ ನಡೆಯಲಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ರು ದ ಫೋರ್‌ಕತ್ (ಫ್ರಾನ್ಸ್)ನಿಂದ ಇಂಟರ್‌ನ್ಯಾಷನಲ್, ನ್ಯೂಸ್ ಲೆಟರ್ ಆನ್ ರಾಕ್ ಆರ್ಟ್ ಎಂಬ ಒಂದು ನಿಯತಕಾಲಿಕೆ ಪ್ರಕಟವಾಗುತ್ತಿದೆ.

ಅಂತ್ಯಹಳೆ ಶಿಲಾಯುಗ(ಸು.ಕ್ರಿ.ಪೂ. 40000–10000), ನೂತನ–ಶಿಲಾ ತಾಮ್ರಯುಗ (ಸು.ಕ್ರಿ.ಪೂ. 2000–800), ಹಾಗೂ ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿ (ಸು.ಕ್ರಿ.ಪೂ. 1200–100)ಜನವಾಸ್ತವ್ಯದ ನೆಲೆಗಳ ಉತ್ಖನನಗಳಲ್ಲಿ ಈ ಸಂಸ್ಕೃತಿಗಳ ಅವಶೇಷಗಳೊಡನೆ ಅಪರೂಪವಾಗಿ ಕೊರೆದ ರೇಖಾ ಚಿತ್ರಗಳುಳ್ಳ ಉತ್ತಮ ಜಾತಿಯ ಕಲ್ಲುತುಂಡು ಅಥವಾ ಆಸ್ಟ್ರಿಚ್ ಪಕ್ಷಿಯ ಮೊಟ್ಟೆ ಸುಡಾವೆ ಮಣ್ಣಿನ ದಂತದ, ಎಲುಬಿನ ಗೊಂಬೆಗಳೂ ದೊರೆತಿವೆ. ಅಲಹಾಬಾದ(ಪ್ರಯಾಗ) ಸಮೀಪ ಬೇಲಾನ ನದಿ ಪ್ರದೇಶ ಅಂತ್ಯ ಹಳೆಶಿಲಾಯುಗದ ಎಲುಬಿನ ಮನುಷ್ಯಾಕೃತಿ(ಸ್ತ್ರೀ) (ಇದು ಮೀನು ಹಿಡಿಯುವ ಎರಡು ಬದಿಗಳಲ್ಲಿ ಹಲ್ಲುಗಳಿರುವ ಗಾಳವಿರಬಹುದೆಂಬ ಅಭಿಪ್ರಾಯವೂ ಇದೆ.), ಪಾಟ್ನೆ(ಧುಳೆ ಜಿಲ್ಲೆ ಮಹಾರಾಷ್ಟ್ರ)ಯ ಇದೇ ಕಾಲದ ಆಸ್ಟ್ರಿಚ್ ಪಕ್ಷಿ ಮೊಟ್ಟೆಯ ಮೇಲಿನ ಗೀರಿದ ರೇಖಾ ಪಟ್ಟಿಕೆ, ಚಂದ್ರಾವತಿ(ರಾಜಸ್ಥಾನ) ಯ ಸೂಕ್ಷ್ಮ ಶಿಲಾಯುಗದ ಸಮಾನಾಂತರವಾಗಿ ನೀಳ ಚುಕ್ಕೆಗಳನ್ನು ಎಬ್ಬಿಸಿದ ಉತ್ತಮ ಜಾತಿ ಕಲ್ಲಿನ ತಿರುಳಿನ ಮೇಲೆ ಕೊರೆದ ವಜ್ರಾಕೃತಿಯ ರೇಖಾ ಸುರುಳಿ, ಇನಾಂಗಾಂವ್‌ನಲ್ಲಿ (ಪುಣೆ ಜಿ. ಮಹಾರಾಷ್ಟ್ರ) ಶಿಲಾ–ತಾಮ್ರಯುಗ (ಕ್ರಿ.ಪೂ. 1700–800) ನೆಲೆಯ ಅತ್ಯಂತ ಚೆಲುವಾದ ಸುಡಾವೆ ಮಣ್ಣಿನ ಸ್ತ್ರೀ ವಿಗ್ರಹವು ಆದಿ ಇತಿಹಾಸ ಕಾಲದ (ದೇವೀ ವಿಗ್ರಹಕ್ಕೆ ಹೋಲುತ್ತದೆ) ಮುಖ್ಯವಾಗಿ ಗಮನಾರ್ಹ.

## ಮುಂದುವರೆದ ಶೋಧನೆ: ಕರ್ನಾಟಕ

ಲಿಯೋನಾರ್ಡ್ ಮನ್ ಅವರ ಶೋಧನೆಯ ನಂತರ 1940ರ ದಶಕದಲ್ಲಿ ಮಸ್ಕಿ, ಕಲ್ಲೂರು(ರಾಯಚೂರು ತಾಲ್ಲೂಕು), ಬಲಚಕ್ರ (ಯಾದಗೀರ್ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ)

ಮತ್ತು ಅತನೂರ್ ಎಂಬಲ್ಲಿ ಹಿಂದಿನ ಹೈದರಾಬಾದ್ ಸಂಸ್ಥಾನದ ಪುರಾತತ್ವ ಸರ್ವೇಕ್ಷಣ ಮತ್ತು ಭೂ ವಿಜ್ಞಾನ ವಿಭಾಗಗಳು ಕ್ರಮವಾಗಿ ಕುಟ್ಟಿದ ಮತ್ತು ಗವಿ ವರ್ಣಚಿತ್ರಗಳನ್ನು ಶೋಧಿಸಿ ತಮ್ಮ ಶಾಖೆಗಳ ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿವೆ. ಆಗಿನ ಮುಂಬೈ ಸರ್ಕಾರದ ಕನ್ನಡ ಸಂಶೋಧನ ಸಂಸ್ಥೆಯು (1956ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸೇರಿಸಲ್ಪಟಿತು), ಕುಳ್ಳೊಳ್ಳಿ (ಜಮಖಂಡಿ, ತಾಲ್ಲೂಕು ವಿಜಾಪುರ ಜಿಲ್ಲೆ) ಯಲ್ಲಿಯ ಗೀರಿದ ಕುಟ್ಟಿದ ಚಿತ್ರಗಳನ್ನು 1951ರ ಸಮಯದಲ್ಲಿ ಪ್ರಕಟಿಸಿತು. ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ (ಇಂಗ್ಲೆಂಡ್) ಡಾ. ಅಲ್ಚಿನ್ ದಂಪತಿಗಳು ಪಿಕ್ಲಿಹಾಳ್ (ಲಿಂಗಸಗೂರು ತಾಲ್ಲೂಕು ರಾಯಚೂರು ಜಿಲ್ಲೆ) ದಲ್ಲಿ ತಾವು ಶೋಧಿಸಿದ ಪ್ರಾಚೀನ ನೆಲೆಯ ಉತ್ಖನನ ಕಾಲದಲ್ಲಿ ಇವೆರಡೂ ತರಹದ ಚಿತ್ರಗಳನ್ನು ಕಂಡುಹಿಡಿದು ಅಧ್ಯಯನ ಮಾಡಿದ್ದಾರೆ.

ಈಚಿನ ಎರಡು ದಶಕಗಳಲ್ಲಿ ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ (ಶಿರಗುಪ್ಪ ತಾ.) ಸಂಗನಕಲ್ಲು, ಬೆಳಗಲ್ಲು ಮತ್ತು ಕುರುಗೋಡು (ಬಳ್ಳಾರಿ ತಾಲ್ಲೂಕು) ಅಪ್ಪಯ್ಯನಹಳ್ಳಿಗಳಲ್ಲಿ ಇಂತಹ ಚಿತ್ರಗಳನ್ನು ಡಾ. ಎಂ.ಎಸ್. ನಾಗರಾಜರಾವ್, ರು.ಮ. ಷಡಕ್ಷರಯ್ಯ ಮೊದಲಾದವರು ಶೋಧಿಸಿದರು.

ಕೇಂದ್ರ ಸರ್ಕಾರದ ಪುರಾತತ್ವ ಸರ್ವೇಕ್ಷಣ ಶಾಖೆಯಲ್ಲಿ ತಾಂತ್ರಿಕ ಸಹಾಯಕನೆಂದು ನಾನು ಕೆಲಸ ಮಾಡುತ್ತಿದ್ದಾಗ, ನಮ್ಮ ಶಾಲೆಯ ಅಧಿಕಾರಿಗಳಾಗಿದ್ದ ಡಾ. ವೈ.ಡಿ. ಶರ್ಮಾರವರ ಕೋರಿಕೆಯಂತೆ 1968ರಲ್ಲಿ, ಲಿಯೊನಾರ್ಡ್ ಮನ್ ಅವರು ಹಿಂದೆ ಹಿರೆಬೆನಕಲ್‌ನಲ್ಲಿ ಶೋಧಿಸಿದ ಚಿತ್ರಗಳ ನೆಲೆಯನ್ನು ಗುರುತಿಸುವ ಸದವಕಾಶ ನನಗೆ ಒದಗಿ ಬಂತು. ಇವುಗಳನ್ನು ಗುರುತಿಸುತ್ತಿದ್ದಾಗ ಆ ಗುಡ್ಡಗಳಲ್ಲಿ ಇನ್ನೂ ಎಂಟು ಕಡೆಗಳಲ್ಲಿ ಇಂತಹ ಚಿತ್ರಗಳು ಸಿಕ್ಕವು. ಈ ಶೋಧನೆಯಿಂದ ಈ ವಿಷಯದಲ್ಲೂ ನನ್ನ ಆಸಕ್ತಿ ಕೆರಳಿತು. ನಾನು ಕರ್ನಾಟಕ ವಿಶ್ವವಿದ್ಯಾಲಯುವನ್ನು ಸೇರಿದ ಮೇಲೆ ಉತ್ತರ ಕರ್ನಾಟಕದಲ್ಲಿಯ ಗವಿ ವರ್ಣಬಂಡೆ ಚಿತ್ರಗಳ ಬಗೆಗೆ ಒಂದು ಪುಸ್ತಕವನ್ನು ಬರೆಯುವ ಯೋಜನೆಯನ್ನು ಹಾಕಿಕೊಂಡೆ. ಇದಕ್ಕೆ ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಅಲ್ಪ ಆರ್ಥಿಕ ನೆರವು ಸಿಕ್ಕಿದೆ. ಇದಕ್ಕೋಸ್ಕರ 1974ರಿಂದ ಹಲವಾರು ಭಾಗಗಳಲ್ಲಿ ಅನ್ವೇಷಣೆ ಕಾರ್ಯವನ್ನು ಕೈಗೊಂಡೆ. ರಾಮದುರ್ಗ, ಬಾದಾಮಿ, ಹೊಸ ಮಹಾಕೂಟ, ಐಹೊಳೆ, ರಾಯಚೂರು ಜಿಲ್ಲೆಯ ಕೊಪ್ಪಳ, ಬಿಳಿಬಾವಿ, ಮಲ್ಲಾಪುರ, ಆನೆಗೊಂದಿ, ತಿಮ್ಮಲಾಪುರ, ನಾರಾಯಣಪುರ, ಬಂಡಿಹರ್ಲಾಪುರ (ಎಲ್ಲವೂ ಗಂಗಾವತಿ ತಾಲ್ಲೂಕು), ಮಾನ್ವಿ, ಬೈಲ್‌ಮರ್ಚೆಡ್ (ಮಾನ್ವಿ ತಾಲ್ಲೂಕು) ಮುಂತಾದೆಡೆಗಳಲ್ಲಿ ವರ್ಣಚಿತ್ರಗಳನ್ನು ಹಾಗೂ ತಾವರೆಗೆರೆ (ರಾಯಚೂರು ಜಿಲ್ಲೆ), ಕುರುಗೋಡದ, ಹಳಕುಂಡಿ(ಬಳ್ಳಾರಿ ಜಿಲ್ಲೆ), ಹಂಪಿ, ಬ್ರಹ್ಮಗಿರಿ, ಜಟ್ಟಿಂಗ ರಾಮೇಶ್ವರ, ಚಿತ್ರದುರ್ಗ, ಚಂದ್ರವಳ್ಳಿ (ಚಿತ್ರದುರ್ಗ ಜಿಲ್ಲೆ), ಬೋಳೆ(ಅಂಕೋಲ ಹತ್ತಿರ, ಉತ್ತರ ಕನ್ನಡ

ಜಿಲ್ಲೆ)ಗಳಲ್ಲಿ ಇತ್ತೀಚೆಗೆ ಹೊಳಲೂರು(ಶಿವಮೊಗ್ಗ ತಾಲ್ಲೂಕು ಮತ್ತು ಜಿಲ್ಲೆ) ವರ್ಣ, ಕುಟ್ಟಿದ ಹಾಗೂ ಗೀರು ಚಿತ್ರಗಳನ್ನು ಹೊಸದಾಗಿ ಶೋಧಿಸಿದೆ. ಇವುಗಳ ಜೊತೆಗೆ ಹಿಂದೆ ಶೋಧವಾದದ್ದನ್ನೆಲ್ಲಾ ಅಧ್ಯಯನ ಮಾಡಿದೆ. ಭಿಲ್ಲಮರಾಯನ ಗುಡ್ಡ, ಹಳಕುಂಡಿ, ಹಿರೆಬೆನಕಲ್, ಬಾದಾಮಿ, ಬೈಲ್‌ಮರ್ಚೆಡ್,-ಚಿತ್ರದುರ್ಗ–ಚಂದ್ರವಳ್ಳಿ ಚಿತ್ರಗಳ ಬಗೆಗೆ ಕೆಲವು ಲೇಖನಗಳನ್ನು ಪ್ರಕಟಿಸಿದ್ದೇನೆ. ಇತ್ತೀಚೆಗೆ ಚಿತ್ರದುರ್ಗದ ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾದ ಎಚ್.ಶ್ರೀಶೈಲ ಆರಾಧ್ಯರು, ಚಿತ್ರದುರ್ಗ–ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಯಲ್ಲಿ ಮತ್ತೆ ಸುಮಾರು 25–30 ವರ್ಣಚಿತ್ರಗಳನ್ನು ಕೆಲವು ಬಯಲು ಬಂಡೆ ಚಿತ್ರಗಳನ್ನು ತಮ್ಮ 'ಸಂಶೋಧನೆಯ ಹಾದಿಯಲ್ಲಿ' ಎಂಬ ಹೊತ್ತಿಗೆಯಲ್ಲಿ ಪ್ರಕಿಟಿಸಿದ್ದಾರೆ. ಇದೊಂದು ಪ್ರಶಂಸನೀಯ ಕೆಲಸ. ಕನ್ನಡ ವಿಶ್ವವಿದ್ಯಾಲಯದ ಶ್ರೀಲಕ್ಷ್ಮಣ ತೆಲಗಾವಿಯವರು ಈ ಪ್ರದೇಶದಲ್ಲಿ ಸಂಶೋಧನೆಯನ್ನು ಮುಂದುವರಿಸಿದ್ದು ಹಲವಾರು ಮಹತ್ವದ ಚಿತ್ರಗಳನ್ನು ಶೋಧಿಸಿ ಅವುಗಳ ವಿಶೇಷ ಅಧ್ಯಯನವನ್ನು ಮಾಡುತ್ತಿದ್ದಾರೆ. ಕುಂದಾಪುರ ಹತ್ತಿರದ ಗಾವಳಿ (ದಕ್ಷಿಣ ಕನ್ನಡ ಜಿಲ್ಲೆ)ಯಲ್ಲಿ ಬಯಲು ಬಂಡೆ ಹಾಗೂ ಗೀರು ಚಿತ್ರಗಳನ್ನು ವಸಂತಶೆಟ್ಟಿಯವರು ಶೋಧಿಸಿದ್ದಾರೆ. ಮೂರು ವರ್ಷಗಳ ಹಿಂದೆ ರಘುನಾಥ ಭಟ್ಟರು ಸೊಂದಾದಲ್ಲಿ ಶ್ರೀಸ್ವರ್ಣವಲ್ಲಿ ಮಠದ ಹತ್ತಿರ ಒಂದು ಅಪೂರ್ವ ಕುಟ್ಟಿದ ಚಿತ್ರ ಸಂಕಲನವನ್ನು ಶೋಧಿಸಿದ್ದಾರೆ.

ಕರ್ನಾಟಕದಲ್ಲಿ ಸ್ವಲ್ಪಮಟ್ಟಿಗೆ ಚಂದ್ರಾವತಿಯದಕ್ಕೆ ಹೋಲುವ ಸಿದ್ಧನ ಕೊಳ್ಳದ ಚರ್ಟ್‌ಕಲ್ಲಿನ ಮೇಲೆ ಕೊರೆದ ಸೂಕ್ಷ್ಮ ಶಿಲಾಯುಗದ ರೇಖಾಕೃತಿ ಡಾ. ಎಸ್. ವಿ. ಪಾಡಿಗಾರರ ಒಂದು ಮಹತ್ವದ ಶೋಧನೆ. ಬ್ರಹ್ಮಗಿರಿ (1947), ಪಿಕ್ಲಿಹಾಳ (1951), ಸಂಗನಕಲ್ ಉತ್ಖನನಗಳಲ್ಲಿ ಶಿಲಾ–ತಾಮ್ರ ಯುಗ ಮತ್ತು ಬೃಹತ್ ಶಿಲಾ ಸಂಸ್ಕೃತಿಯ ಕೆಲವು ಸುಡಾವೆ ಮಣ್ಣಿನ ಗೊಂಬೆಗಳು, ವಿವಿಧ ಪ್ರಾದೇಶಿಕ ಸಂಸ್ಕೃತಿಗಳ ನಾನಾ ಪ್ರಕಾರಗಳ ವಿಫುಲವಾಗಿ ವರ್ಣ ಇಲ್ಲವೆ ಕೊರೆದ ರೇಖಾ ಚಿತ್ರಗಳಿಂದ ಸುಂದರಗೊಳಿಸಿದ ಮಣ್ಣಿನ ಹಾಗೂ ಬೆರಳೊತ್ತು ಮಾಲಿಕೆಗಳಿಂದ ಅಲಂಕೃತವಾದ ಪಾತ್ರೆ ಚೂರುಗಳು, ನಾನಾ ಪ್ರಕಾರಗಳ ರೂಪಣವುಳ್ಳ ಮುಚ್ಚಳದ ಹಿಡಿಕೆಗಳು, ತೇರದಾಳ್, ಕುಡಚಿ, ಸತ್ತಿ, ಮಂಗಸೂಳಿ ಮೊದಲಾದ ನೆಲೆಗಳಲ್ಲಿ ವರ್ಣ ರೇಖಾ ಚಿತ್ರಗಳುಳ್ಳ ಮಣ್ಣಿನ ಪಾತ್ರೆಗಳು ಆಯಾಯ ಕಾಲದ ಜನರ ಸೌಂದರ್ಯ ಪ್ರಜ್ಞೆ, ಹುಲುಸಾದ ಕಲ್ಪನಾ ಶಕ್ತಿ ಮತ್ತು ಕರಕುಶಲತೆಗೆ ಉತ್ತಮ ಸಾಕ್ಷಿಗಳಾಗಿವೆ. ❑

# 2. ಚಿತ್ರಗಳು

## ನೆಲೆಗಳು

ಈ ಚಿತ್ರಗಳಲ್ಲಿ ಎರಡು ವಿಧ: 1. ಗವಿಯೊಳಗೆ ಅಥವಾ ಕಲ್ಲಾಸರೆಯ ಒಳಬದಿಯಲ್ಲಿ ಕೆಮ್ಮಣ್ಣಿನ ಬಣ್ಣದಲ್ಲಿ ಬಿಡಿಸಿದ ಚಿತ್ರಗಳು, ಮತ್ತು 2. ಬಯಲು ಬಂಡೆಯ ಮೇಲೆ ಕುಟ್ಟಿ ಅಥವಾ ಚೂಪಾದ ಸಾಧನದಿಂದ ಸ್ಪಷ್ಟ ಗೆರೆಗಳನ್ನು ಮೂಡಿಸಿ ಬಿಡಿಸಿದ ಚಿತ್ರಗಳು. ಉತ್ತರ ಕರ್ನಾಟಕದಲ್ಲಿ ಇದುವರೆಗೆ 30 ಸ್ಥಳಗಳಲ್ಲಿ ಒಟ್ಟು 130 ವರ್ಣಚಿತ್ರ ಗವಿಗಳು ಮತ್ತು 18 ಸ್ಥಳಗಳಲ್ಲಿ 20 ಬಯಲು ಬಂಡೆ ಚಿತ್ರ ನೆಲೆಗಳು ಶೋಧವಾಗಿವೆ. ಗವಿವರ್ಣ ಚಿತ್ರಗಳ ನೆಲೆಗಳಲ್ಲಿ ಸುಮಾರು 25 ರಾಮದುರ್ಗ (ಬೆಳಗಾವಿ ಜಿಲ್ಲೆ)–ಬಾದಾಮಿ–ಐಹೊಳೆ, 37 ಕೊಪ್ಪಳ–ಪಿಕ್ಕಿಹಾಳ–ಹಿರೆಬೆನಕಲ್–ಆನೆಗೊಂದಿ–ಹಂಪೆ, 3 ರಾಯಚೂರು–ಮಾನ್ವಿ, 43 ಬ್ರಹ್ಮಗಿರಿ–ಚಿತ್ರದುರ್ಗ ಪ್ರದೇಶಗಳಲ್ಲಿ ಇವೆ. ಬಯಲು ಬಂಡೆ ಚಿತ್ರಗಳು ಭಿಲ್ಲಮರಾಯನ ಗುಡ್ಡ–ಪಿಕ್ಕಿಹಾಳ ತಾವರೆಗೆರೆ, ಕುರಗೋಡು, ಸಂಗನಕಲ್ಲು–ಬೆಳಗಲ್–ಹಳಕುಂಡಿ, ಅಪ್ಪಯ್ಯನಹಳ್ಳಿ–ಬ್ರಹ್ಮಗಿರಿ, ಚಿತ್ರದುರ್ಗ ಮತ್ತು ಮಲೆನಾಡಿನ ಹೊಳಲೂರು, ಸೋಂದಾ, ಪಶ್ಚಿಮ ಕಡಲು ತೀರದ ಅಂಕೋಲ–ಕುಂದಾಪುರ ಪ್ರದೇಶಗಳಲ್ಲಿವೆ.

ರಾಮದುರ್ಗ–ಬಾದಾಮಿ–ಐಹೊಳೆ ಪ್ರದೇಶವೆಲ್ಲ ಬೆಟ್ಟಗಳ ಸಾಲುಗಳಿಂದ ತುಂಬಿದೆ. ಭೂ ವಿಜ್ಞಾನ ಅಧ್ಯಯನದ ಪ್ರಕಾರ ಕಲಾದಗಿ ಶ್ರೇಣಿ (Kaladgi Series)ಯ 'ಷ್ಟು ಕಲ್ಲಿನ (Sedimentary rocks of Quartzitic sandstone, shale; conglomerate etc.) ಬೆಟ್ಟಗಳು ಆಕರ್ಷಕ ನಸುಗೆಂಪು ಬಣ್ಣದ ಕಲ್ಲುಗುಡ್ಡಗಳ ಸಾಲುಗಳಲ್ಲಿ ಅಲ್ಲಲ್ಲಿ ಸಾವಿರಾರು ವರ್ಷಗಳ ಸವಕಳಿಯಿಂದ ವಿಸ್ತಾರವಾದ ಭವ್ಯ ಕಲ್ಲಾಸರೆಗಳುಂಟಾಗಿವೆ. ರಾಯಚೂರು–ಬಳ್ಳಾರಿ– ಚಿತ್ರದುರ್ಗ ಪ್ರದೇಶವೂ ಕಲ್ಲುಗುಡ್ಡಗಳಿಂದ ಬೆಟ್ಟದ ಸಾಲುಗಳಿಂದ ತುಂಬಿಹೋಗಿದೆ. ಅಸಾಮಾನ್ಯ ಕಂದು ಇಲ್ಲವೆ ಬೂದು ವರ್ಣದ ಗ್ರಾನೈಟ್, ವಿಪರೀತ ಉಷ್ಣ–ಶೀತಗಳ ವೈಪರೀತ್ಯದಿಂದ ಸಾಮಾನ್ಯ ದೊಡ್ಡ ದೊಡ್ಡ ಬಂಡೆಗಳು ತಾನಾಗಿಯೇ ಸೀಳಿ ಹೋಗುವುದರಿಂದ ಕಲ್ಲಾಸರೆಗಳು, ಸವಕಳಿಯಿಂದ ಗುಹೆಗಳು ಉಂಟಾಗಿವೆ. ಇಂತಹ ಕಲ್ಲಾಸರೆ ಗವಿಗಳಲ್ಲಿ ವಿರಳವಾಗಿ ವರ್ಣಚಿತ್ರಗಳಿವೆ. ಉತ್ತರ ಕನ್ನಡ ಜಿಲ್ಲೆಯ ಸಮುದ್ರ ತೀರಪ್ರದೇಶವು ಜಂಬಿಟ್ಟಿಗೆ ಕಲ್ಲಿನ ಸಮತಟ್ಟು ಸ್ವಲ್ಪ ಒಳ ಪ್ರದೇಶದಲ್ಲಿ

ಇದೇ ಕಲ್ಲಿನ ಗುಡ್ಡಗಳ ಸಾಲುಗಳಿವೆ. ಈ ಎಲ್ಲ ಪ್ರದೇಶಗಳಲ್ಲೂ ದೊಡ್ಡ ನದಿ, ಉಪನದಿಗಳಿಂದ ನೀರಿನ ಸಮೃದ್ಧಿ, ಫಲವತ್ತಾದ ಮಣ್ಣು, ದಟ್ಟವಾದ ಕಾಡು ಹಾಗೂ ವಿರಳ ಸಸ್ಯವರ್ಗ, ಉತ್ತಮ ವರ್ಗದ ಚಿನ್ನ, ಕಬ್ಬಿಣದ ಅದುರಿನ ವಿಪುಲತೆ ಇದ್ದು ಮನುಷ್ಯನ ವಸತಿಗೆ, ಜೀವನೋಪಾಯಕ್ಕೆ ಅನುಕೂಲಕರವಾಗಿತ್ತು. ಆದ್ದರಿಂದ ಲಕ್ಷಾಂತರ ವರ್ಷಗಳ ಹಿಂದಿನಿಂದಲೂ ಈ ಭಾಗಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಅನೂಚಾನವಾಗಿ ಜನವಸತಿಯಿತ್ತು. ಕಾಲಾನುಕ್ರಮದಲ್ಲಿದ್ದ ವಿವಿಧ ಜನವರ್ಗಗಳ ವಾಸ್ತವ್ಯದ ನಿತ್ಯ ಬಳಕೆಯ ವಸ್ತುಗಳ ಅವಶೇಷಗಳು ನೂರಾರು ಸ್ಥಳಗಳಲ್ಲಿ ಸಿಕ್ಕಿವೆ. ಇವು ವಿವಿಧ ಹಂತಗಳಾದ ಹಳೆಯ ಶಿಲಾಯುಗ (Old Stone Age) ಕನಿಷ್ಠ ಎರಡು ಲಕ್ಷ ವರ್ಷಗಳಿಗಿಂತಲೂ ಹಿಂದಿನಿಂದ 8,000 ವರ್ಷಗಳವರೆಗೆ), ಸೂಕ್ಷ್ಮ ಶಿಲಾಯುಗ (Mesolithic): ಸು.ಕ್ರಿ.ಪೂ. 10,000–5,000), ನೂತನ ಶಿಲಾಯುಗದ (New Stone Age:ಸು.ಕ್ರಿ.ಪೂ. 2,300–1,800, ಶಿಲಾ–ತಾಮ್ರಯುಗ (ಸು. 2,000–200) ಕಬ್ಬಿಣ ಯುಗದ ಬೃಹತ್ ಶಿಲಾಯುಗ (Iron Age megalithic: ಕ್ರಿ.ಪೂ. ಸು. 1,200–200), ಇತಿಹಾಸ ಪ್ರಾರಂಭಕಾಲ (Early Historical: ಕ್ರಿ.ಪೂ.ಸು. 300–ಕ್ರಿ.ಶ. 2ನೇ ಶತಮಾನ)ದ ಸಾಂಸ್ಕೃತಿಕ ಅವಶೇಷಗಳುಳ್ಳ ನೆಲೆಗಳು. ಬಾದಾಮಿ, ಐಹೊಳೆ ಪ್ರದೇಶದಲ್ಲಿ ಹೆಚ್ಚಾಗಿ ಹಳೆ ಶಿಲಾಯುಗದ, ಶಿಲಾ–ತಾಮ್ರ ಯುಗದ ಮತ್ತು ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳು, ಸಮುದ್ರ ತೀರಪ್ರದೇಶ ಬಿಟ್ಟು ಘಟ್ಟ ಪ್ರದೇಶಗಳಲ್ಲಿ ಹೆಚ್ಚಾಗಿ ನೂತನ ಶಿಲಾಯುಗ–ಬೃಹತ್‌ಶಿಲಾಯುಗ, ಇತಿಹಾಸ ಪ್ರಾರಂಭಕಾಲದ ನೆಲೆಗಳು ಶೋಧವಾಗಿದೆ. ಸಮುದ್ರ ತೀರ ಪ್ರದೇಶದಲ್ಲಿ, ಹೆಚ್ಚಾಗಿ ದಕ್ಷಿಣ ಕನ್ನಡ ಜಿಲ್ಲೆಯ ಭಾಗದಲ್ಲಿ ಬೃಹತ್ ಶಿಲಾಯುಗದ ಹಾಗೂ ಇತಿಹಾಸ ಪ್ರಾರಂಭ ಕಾಲದ ನೆಲೆಗಳು ಈಗಾಗಲೇ ಬೆಳಕಿಗೆ ಬಂದಿವೆ. ಇತ್ತೀಚಿನ ವರ್ಷದಲ್ಲಿ, 1981ರ ಮೇ–ಜೂನ್ ಸಮಯದಲ್ಲಿ ಮಂಗಳೂರಿನ ಪೂರ್ವಕ್ಕೆ ನೇತ್ರಾವತಿ ನದಿ ಬಯಲಿನಲ್ಲಿಯ ಮಾಣಿ ಮತ್ತು ಉಪ್ಪಿನಂಗಡಿ ಭಾಗಗಳಲ್ಲಿ ಒಂದು ಪ್ರಾಣಿಯ ಅಸ್ಥಿಯ ಪಡಿಯಚ್ಚಿನೊಡನೆ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಕಲ್ಲಿನ ಉಪಕರಣಗಳು ಸಿಕ್ಕಿವೆ. 1990ರ ಸುತ್ತಮುತ್ತ ಸೀತಾ ನದಿ ಬಯಲಿನ ನಾಲ್ಕು ನೆಲೆಗಳಲ್ಲಿ ಬಿಡಿ ಬಿಡಿಯಾಗಿ ನೂತನ ಶಿಲಾಯುಗ ಸಂಸ್ಕೃತಿಯ ಕಲ್ಲಿನ ಕೊಡಲಿಗಳು ಶೋಧವಾಗಿವೆ. ಇತಿಹಾಸಯುಗದಲ್ಲಿಯಂತೂ ಉತ್ತರ ಕರ್ನಾಟಕವು ದಕ್ಷಿಣ ಭಾರತ–ದಖನ್ ಪ್ರಸ್ಥಭೂಮಿಯ ರಾಜಕೀಯ ಮತ್ತು ಸಾಂಸ್ಕೃತಿ ಕ್ಷೇತ್ರಗಳಲ್ಲಿ ಮಹತ್ವದ ಪಾತ್ರವನ್ನು ವಹಿಸಿದ ವಿಷಯವು ಸರ್ವವಿದಿತ. ಹೀಗೆ ಉದಾರ ಮತ್ತು ಅನುಕೂಲಕರವಾದ ಭೌಗೋಳಿಕ ಪರಿಸರ ಮತ್ತು ವಿಶಿಷ್ಟ ಸಾಂಸ್ಕೃತಿಕ ಪರಂಪರೆಯುಳ್ಳ ಉತ್ತರ ಕರ್ನಾಟಕದಲ್ಲಿ ಪ್ರಾಚೀನ ಕಾಲದ ಜನಸಾಮಾನ್ಯ ಒಂದು ವಿಶಿಷ್ಟ ಸಂಪ್ರದಾಯದ ಗವಿ ವರ್ಣ, ಬಯಲು ಬಂಡೆ ಚಿತ್ರಗಳು ಇರುವುದರಲ್ಲಿ ಹಾಗೂ ಅವರ ನಿತ್ಯ ಬಳಕೆಯ ವಸ್ತುಗಳಲ್ಲಿ ವೈವಿಧ್ಯಮಯ ಚಿತ್ರಗಳಿರುವುದು ಆಶ್ಚರ್ಯವೇನಿಲ್ಲ.

ಸಾಮಾನ್ಯವಾಗಿ ಗವಿ ವರ್ಣ ಮತ್ತು ಬಯಲು ಬಂಡೆ ಚಿತ್ರಗಳು ಒಂದೆಡೆಯಲ್ಲಿಯೇ ಇರುವುದಿಲ್ಲ. ಆದರೆ ಕ್ವಚಿತ್ತಾಗಿ ಇವೆರಡು ಚಿತ್ರಗಳೂ ಒಂದೆಡೆಯಲ್ಲಿವೆ. ಪಿಕ್ಳಿಹಾಳದ ನೂತನ ಶಿಲಾಯುಗ–ಬೃಹತ್ ಶಿಲಾಯುಗ–ಇತಿಹಾಸ ಪ್ರಾರಂಭ ಕಾಲದ ಸಂಸ್ಕೃತಿಗಳ ಅವಶೇಷಗಳುಳ್ಳ ಪ್ರಾಚೀನ ನಿವೇಶನದ ಸುತ್ತಮುತ್ತ ವರ್ಣಚಿತ್ರಗಳು ಹಾಗೂ ಕುಟ್ಟಿದ ಚಿತ್ರಗಳು ಇವೆ. ಕುರುಗೋಡಿನ ಒಂದೆಡೆಯಲ್ಲಿ ಒಂದು ತರಹದ್ದು, ಇನ್ನೊಂದೆಡೆಯಲ್ಲಿ ಇನ್ನೊಂದು ತರಹದ್ದು ಇವೆ. ಇವೆರಡು ಪ್ರಕಾರದ ಚಿತ್ರಗಳಲ್ಲಿ ಬಹಳ ಅಪರೂಪವಾಗಿ ಒಂದೊಂದರಲ್ಲಿ ಪರಸ್ಪರ ಸಾಮ್ಯವಿರುತ್ತದೆ. ಬೆಳಗಲ್ಲಿನ ಕುಟ್ಟಿದ, ಚಿತ್ರದುರ್ಗದ ಗೀರು ಗೂಳಿಯು, ಅಂಜನಹಳ್ಳಿಯ (ಆನೆಗೊಂದಿ ಹತ್ತಿರ) ವರ್ಣದ ಗೂಳಿ ಚಿತ್ರಗಳಲ್ಲಿ ಬಹಳ ಸಾಮ್ಯವಿದೆ. ಇದರಂತೆಯೆ ಹಳಕುಂಡಿಯ ಬಯಲು ಬಂಡೆ ಕುಟ್ಟಿದ ಜಿಂಕೆಯು ಮುಚಟ್ಲ ಚಿಂತಮಾವುಗವಿ (ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ)ವರ್ಣದ ಜಿಂಕೆಗೆ ಶೈಲಿಯಲ್ಲಿ ಬಹಳ ಹೋಲುತ್ತದೆ. ಈ ತರಹದ ಹೋಲಿಕೆ ತೀರಾ ಸಮೀಪವಾಗಿದ್ದು, ಇವುಗಳನ್ನು ಸೃಷ್ಟಿಸಿದ ಜನರಲ್ಲಿ ಪರಸ್ಪರ ಸಾಂಸ್ಕೃತಿಕ ಸಂಪರ್ಕವಿದ್ದಿರಬೇಕೆಂದು ಇಲ್ಲವೆ ಇವೆರಡನ್ನೂ ಸೃಷ್ಟಿಸಿದವರು ಒಂದೇ ಜನವರ್ಗದವರಿರಬೇಕೆಂದು ತರ್ಕಿಸಬಹುದು.

ಗವಿ ವರ್ಣಚಿತ್ರಗಳಾಗಲಿ, ಬಯಲು ಬಂಡೆಚಿತ್ರಗಳಾಗಲಿ ಸಾಮಾನ್ಯವಾಗಿ ಸಣ್ಣ ಹಾಗೂ ಮಧ್ಯಮ ಪ್ರಮಾಣದಲ್ಲಿರುತ್ತವೆ. ಸುಮಾರು 10 ಸೆಂ.ಮಿ.ನಿಂದ 1.20 ಮೀ.ವರೆಗೆ ಇರುತ್ತವೆ. ಆದರೆ ಅಪರೂಪವಾಗಿ ವರ್ಣಚಿತ್ರಗಳಲ್ಲಿ ಬೃಹದಾಕಾರದ ಚಿತ್ರಗಳೂ ಇವೆ. ಹಿರೆಬೆನಕಲ್ಲಿನ 3ನೇ ಗವಿ ವರ್ಣಚಿತ್ರ ಮನುಷ್ಯಾಕೃತಿಯು ಸುಮಾರು 2 ಮೀ.ಗಿಂತಲೂ ಸ್ವಲ್ಪ ಎತ್ತರವಿದೆ. ನಾರಾಯಣಪೇಟೆಯ (ಗಂಗಾವತಿ ತಾಲ್ಲೂಕು, ರಾಯಚೂರು ಜಿಲ್ಲೆ) ಮನುಷ್ಯಾಕೃತಿಯು ಅತ್ಯಂತ ದೊಡ್ಡದಿದ್ದು, ಸುಮಾರು 4 ಮೀ.ಗಿಂತಲೂ ಸ್ವಲ್ಪ ಎತ್ತರವಿದೆ. ಈ ವರ್ಣಚಿತ್ರ ಬಯಲು ಬಂಡೆ ಚಿತ್ರಗಳ ಹತ್ತಿರ ಶಿಲಾ–ತಾಮ್ರಯುಗ ಹಂತದಲ್ಲಿಯ ನೂತನ ಶಿಲಾಯುಗ ಸಂಸ್ಕೃತಿಯ ಬೃಹತ್ ಶಿಲಾಸಂಸ್ಕೃತಿಯ ವಾಸ್ತವ್ಯದ ನೆಲೆಗಳಿವೆ. ಉದಾಹರಣೆ: ಪಿಕ್ಳಿಹಾಳ, ಕುರುಗೋಡು, ಚಿಕ್ಕರಾಮಪುರ, ಹಿರೆಬೆನಕಲ್, ಆಂಜನಹಳ್ಳಿ, ಬೆಳಗಲ್ಲು, ಚಿತ್ರದುರ್ಗ, ಗಾವಳಿ ಮೊದಲಾದವು.

❑

## 3. ಗವಿ ವರ್ಣಚಿತ್ರಗಳು (ಪ್ರಾಗೈತಿಹಾಸಿಕ)

ನೂರಾರು ಕಿ.ಮೀ.ಗಳುದ್ದಗಲಕ್ಕೂ ಹರಡಿದ ಬೆಟ್ಟಗಳ ನಾನಾ ಕಡೆಗಳಲ್ಲಿ ಈ ಚಿತ್ರಗಳು ಸಾಮಾನ್ಯವಾಗಿ ಗವಿಯೊಳಗಿನ ಬಂಡೆಗಳ ಮೇಲೆ ಇರುತ್ತವೆ. ಸಹಜವಾಗಿಯೇ ಇಲ್ಲಿ ಬೆಳಕು ಕಡಿಮೆ. ಅಷ್ಟೇನು ಸುಲಭವಾಗಿ ಪ್ರವೇಶಿಸಲಾಗದಂತಹ ತೀರಾ ದುರ್ಗಮವಾದ ಗವಿಗಳಲ್ಲಿ ವರ್ಣಚಿತ್ರಗಳಿರುತ್ತವೆ. ಹಿರೆಬೆನಕಲ್ಲಿನ 11ನೇ ಚಿತ್ರಗವಿಯು ಆ ಬೆಟ್ಟದ ಸಾಲಿನಲ್ಲೇ ಅತಿ ಎತ್ತರದಲ್ಲಿದ್ದು, ಅದನ್ನು ಮುಟ್ಟುವುದು ತುಂಬಾ ಪ್ರಯಾಸವೇ ಸರಿ. ಕುರುಗೋಡಿನ 4ನೇ ಚಿತ್ರಗವಿಗೆ ಹೋಗಲು ಸುಮಾರು 3 ಮೀ. ಎತ್ತರದ ಕಡಿದಾದ ಹಾಗೂ ಇಕ್ಕಟ್ಟಾದ ಬಂಡೆಯಲ್ಲಿ ತೆವಳಿಕೊಂಡು ಹಾಗೂ ಕುಳಿತು ಸರಿಯುತ್ತಾ ಸಾಗಬೇಕು. ಇಂತಹ ಗವಿಗಳಿಗೆ ಹೋಗುವುದೇ ಒಂದು ಸಾಹಸದ ಕೆಲಸ. ಸಾಮಾನ್ಯವಾಗಿ ಪ್ರತ್ಯೇಕವಾಗಿ ಮನುಷ್ಯರ, ಪ್ರಾಣಿಗಳ ಮತ್ತು ವಿಚಿತ್ರವಾದ ರೇಖಾ ಚಿತ್ರಗಳು ಇರುತ್ತವೆ. ಜೊತೆಗೆ ಕೆಲವು ಗವಿಗಳಲ್ಲಿ ಸಮೂಹ ನೃತ್ಯ ಪ್ರಾಣಿಗಳ ಸಾಲುಗಳು, ಮನುಷ್ಯರ ಜೋಡಿಗಳು ಇರುತ್ತವೆ. ಮನುಷ್ಯರು ನಿಂತ ಭಂಗಿಯಲ್ಲಿರುವುದು ಸರ್ವೇ ಸಾಮಾನ್ಯ. ಪ್ರಾಣಿಗಳ ಮತ್ತು ಮನುಷ್ಯರ ಚಿತ್ರಗಳನ್ನು ಕೇವಲ ಬಾಹ್ಯರೇಖೆಗಳಿಂದ ಮಾತ್ರ ತೋರಿಸಲಾಗಿರುತ್ತದೆ. ಕಣ್ಣು, ಕಿವಿ, ಮೂಗು, ಬಾಯಿ, ಅಪರೂಪವಾಗಿ ಕೈಬೆರಳು, ಹಸ್ತ, ಪಾದಗಳನ್ನು ಸಹ ಸೂಚಿಸಿರುತ್ತದೆ. ಈ ಬಾಹ್ಯ ರೇಖೆಗಳ ಒಳ ಭಾಗವನ್ನು ಹಲವೆಡೆಗಳಲ್ಲಿ ಬಣ್ಣದಿಂದ ತುಂಬಲಾಗಿರುತ್ತದೆ. ಇಂಥ ಚಿತ್ರಗಳಲ್ಲಿ ಪ್ರಾಣಿ, ಮನುಷ್ಯರ ನೆರಳು ಇದ್ದಂತೆ ಇವು ಇರುತ್ತವೆ. ಈ ಆಕೃತಿಗಳು ಒಂದು ನಿರ್ದಿಷ್ಟ ಪ್ರಮಾಣದಲ್ಲಿರುವುದಿಲ್ಲ. ಕೇವಲ ಒಂದೆರಡು ಅಥವಾ ಕೆಲವು ಚಿತ್ರಗಳು ಇರಬಹುದು. ಅಥವಾ ಹಲವಾರು ಚಿತ್ರಗಳೂ ಇರಬಹುದು. ಎಲ್ಲ ಚಿತ್ರಗಳೂ ಒಂದೇ ಕಾಲದವಲ್ಲ. ಆದ್ದರಿಂದ ವಿವಿಧ ಪ್ರಮಾಣದ ಆಕೃತಿಗಳ ನಿರೂಪಣೆಯಲ್ಲೂ ಸ್ವಲ್ಪ ಭಿನ್ನತೆ ಇರುತ್ತದೆ. ಕ್ರಮವಾಗಿ ಒಂದು ಕಡೆಯಿಂದ ವ್ಯವಸ್ಥಿತವಾಗಿ ಬರೆದು ಸ್ಥಳವನ್ನು ತುಂಬಿಸದೆ ಒಬ್ಬೊಬ್ಬರು ಒಂದೊಂದು ಸಮಯದಲ್ಲಿ ಅವರಿಗೆ ಅನುಕೂಲವಾದ ಭಾಗದಲ್ಲಿ, ದಿಕ್ಕಿಗೆ ಚಿತ್ರಗಳನ್ನು ಬರೆದಂತೆ ಕಾಣುತ್ತದೆ. ಆದ್ದರಿಂದ ಚಿತ್ರಗಳು ಚೆಲ್ಲಾಪಿಲ್ಲಿಯಾಗಿವೆ. ಹೆಚ್ಚಾಗಿ ಕೆಮ್ಮಣ್ಣಿನ ಬಣ್ಣದಲ್ಲಿವೆ. ಬಣ್ಣದ ಛಾಯೆಯು ಕಾಲ ವೈಪರೀತ್ಯದಿಂದ ಹಾಗೂ ಇತರ ಕಾರಣಗಳಿಂದ ಒಂದೇ ಸಮನಾಗಿರುವುದಿಲ್ಲ. ಅಪರೂಪವಾಗಿ ಕಾಡಿಗೆ ಕಪ್ಪು ಹಾಗೂ ಮಿಶ್ರಿತ ಹಳದಿ ಮುಸುಕು ಬಿಳಿಯ ದ್ವಿವರ್ಣಗಳಲ್ಲೂ ಚಿತ್ರಗಳಿವೆ ಬಾದಾಮಿಯ 3ನೇ ಗವಿಯ ಚಿತ್ರಗಳು

ದ್ವಿವರ್ಣದಲ್ಲಿವೆ. ಮಧ್ಯಯುಗೀನ ಕಾಲದ ಚಿತ್ರಗಳು ಸುಣ್ಣದಂತಹ ಬಿಳಿಯ ಬಣ್ಣದಲ್ಲಿವೆ. ಬ್ರಹ್ಮಗಿರಿ ಮತ್ತು ಚಿತ್ರದುರ್ಗದ ಹಲವಾರು ಚಿತ್ರಗಳೂ ಬಿಳಿಯ ಬಣ್ಣದಲ್ಲಿವೆ.

ಚಿತ್ರಕಾರರು ಬರೆಯಲು ಒಂದೊಂದು ಕಡೆಯಲ್ಲಿ ಬಹಳ ಶ್ರದ್ಧೆ, ಶ್ರಮವನ್ನು ವಹಿಸಿದ್ದಾರೆಂದು ಸ್ಪಷ್ಟವಾಗಿ ಕಾಣುತ್ತದೆ. ಹಿರೆಬೆನಕಲ್ಲಿನ 6ನೇ ಗವಿ ಮತ್ತು ಕುರುಗೋಡಿನ 4ನೇ ಗವಿಗಳಲ್ಲಿ ಚಿತ್ರಕಾರನು ಅಂಗಾತವಾಗಿ ಮಲಗಿಯೇ ಚಿತ್ರ ಬಿಡಿಸಿರಲು ಸಾಧ್ಯ. ನಾರಾಯಣಪುರದಲ್ಲಿಯಂತೂ ಮುಂದೆ ಬಾಗಿದ ಒಂದು ಎತ್ತರವಾದ ಬಹು ದೊಡ್ಡ ಬಂಡೆಯ ಸಮತಲವಾದ ಒಳ ಮೈಮೇಲೆ ಸುಮಾರು 4 ಮೀ. ಎತ್ತರದ ಒಂದು ಮನುಷ್ಯಾಕೃತಿಯನ್ನು ಬಿಡಿಸಲಾಗಿದೆ. ತಲೆಯ ಭಾಗವು ನೆಲದಿಂದ ಸುಮಾರು 3.5 ಮೀ. ಎತ್ತರದಲ್ಲಿದೆ. ಆ ಭಾಗವನ್ನು ಬಿಡಿಸಲು ಚಿತ್ರಕಾರನು ಎಂತಹದಾದರೂ ಅಗಲವಾದ ಅಟ್ಟಣೆಗೆಯನ್ನು ಕಟ್ಟಿಕೊಂಡಿರಬೇಕು.

ನಿಸರ್ಗದಲ್ಲಿ ದೊರೆಯುವ ಕೆಮ್ಮಣ್ಣಿನ ಗಟ್ಟಿಯನ್ನು ಬಣ್ಣ ತಯಾರಿಸಿಕೊಳ್ಳಲು ಉಪಯೋಗಿಸಿದ್ದಿರಬೇಕು. ಇದರ ಜೊತೆಗೆ ರಕ್ತವನ್ನೊ ಅಥವಾ ವನಸ್ಪತಿಯ ರಸವನ್ನೊ ಸೇರಿಸಿರಬೇಕೆಂದೂ ಆದ್ದರಿಂದಲೇ ಮಳೆ ಗಾಳಿಯ ಹೊಡೆತಕ್ಕೆ ಕೆಲವೆಡೆಗಳಲ್ಲಿ ಇವು ಸಿಕ್ಕರೂ ಅಳಿಸಿ ಹೋಗದೆ ಉಳಿದಿವೆಯೆಂದೂ ಅಭಿಪ್ರಾಯವಿದೆ. ಬಣ್ಣದಲ್ಲಿ ರಕ್ತ ಮಿಶ್ರಣವಿದ್ದಲ್ಲಿ ಬಹುಮಟ್ಟಿಗೆ ಅದು ಹಂದಿಯದಾಗಿರಬೇಕೆಂಬ ಅಭಿಪ್ರಾಯವೂ ಇದೆ. ಏಕೆಂದರೆ ಇತರ ಪ್ರಾಣಿಗಳ ಮನುಷ್ಯರ ರಕ್ತವು ಬೇಗ ಗಟ್ಟಿಯಾಗುವಂತೆ ಇದು ಆಗುವುದಿಲ್ಲ. ಆದರೆ ಈ ಬಣ್ಣವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ ನಂತರವೇ ನಿಜಸಂಗತಿ ತಿಳಿಯಬಹುದು. ಈ ದಿಸೆಯಲ್ಲಿ ಅಧ್ಯಯನವು ನಮ್ಮಲ್ಲಿ ಸಮರ್ಪಕವಾಗಿ ಇನ್ನೂ ನಡೆದಿಲ್ಲ.

ಒಂದು ಗಿಡದ ರೆಂಬೆಯ ತುದಿಯನ್ನು ಸರಿಯಾಗಿ ಜಜ್ಜಿ ತೊಗಟೆಯು ಹೋಗುವಂತೆ ಮಾಡಿ, ಕೂದಲಿನಂತಹ ನಾರುಗಳನ್ನು ಬಿಡಿಸಿ ಕುಚ್ಚಿನಂತೆ ಮಾಡಿ ಅದನ್ನು ಕುಂಚದಂತೆ ಬಣ್ಣದ ರೇಖೆಯನ್ನು ಎಳೆಯಲು ಉಪಯೋಗಿಸಿದ್ದಿರಬೇಕು. ಆದರೆ ಈಚಿನ ಕಾಲದ ಕೆಲವು ಬಿಳಿಬಣ್ಣದ ಚಿತ್ರಗಳಲ್ಲಿ ಬೆರಳಿನ ರೇಖೆಗಳೂ ಮೂಡಿರುವುದರಿಂದ ಬೆರಳುಗಳಿಂದಲೂ ರೇಖೆಗಳನ್ನು ಎಳೆಯಲಾಗುತ್ತಿತ್ತೆಂದು ತಿಳಿಯಬಹುದು. ಕುರುಗೋಡಿನ 1ನೇ ಗವಿಯಲ್ಲಿಯ ಮತ್ತು ತಿಮ್ಮಲಾಪುರದ ಚಿತ್ರಗಳಲ್ಲಿ ಈ ಲಕ್ಷಣಗಳಿವೆ. ಹಿರೆಬೆನಕಲ್ಲಿನ 11ನೇ ಚಿತ್ರಗವಿಯಲ್ಲಿ ಜಿಂಕೆಗಳ ಸಾಲಿನ ಪ್ರತಿಯೊಂದು ಜಿಂಕೆಯು ಒಂದೇ ಪ್ರಮಾಣ ಮತ್ತು ರೀತಿಯಲ್ಲಿದೆ. ಆದ್ದರಿಂದ ಚರ್ಮದಲ್ಲಿಯೋ ದಪ್ಪ ಎಲೆಯಲ್ಲಿಯೋ ಚಿತ್ರವನ್ನು ಕತ್ತರಿಸಿಕೊಂಡು ಅದನ್ನು ಬಂಡೆಯ ಮೇಲಿಟ್ಟು ಕತ್ತರಿಸಿದ ಭಾಗದಲ್ಲಿ ಬಣ್ಣವನ್ನು ತುಂಬುತ್ತಿದ್ದಿರಬೇಕು. ಅಷ್ಟು ಸರಿಯಾಗಿ ಒಂದೇ ಪ್ರಕಾರದಲ್ಲಿ ಈ ಚಿತ್ರಗಳಿವೆ.

ಒರಟು ಬಂಡೆಯ ಮೇಲೆ ನೇರವಾಗಿ ಚಿತ್ರಗಳನ್ನು ಬಿಡಿಸಲಾಗಿದೆ. ಕಾಲದುದ್ದಕ್ಕೂ ಈ ಕ್ರಮವನ್ನೆ ಅನುಸರಿಸಲಾಗಿದೆ. ಆದರೆ ಅಪರೂಪಕ್ಕೆ ಅದು ಇತಿಹಾಸಯುಗದಲ್ಲಿ ಮಾತ್ರ ಮೊದಲು ಆರಿಸಿದ ಭಾಗದ ಬಂಡೆಯ ಮೇಲೆ ಸ್ವಲ್ಪ ಹಳದಿ ಮಿಶ್ರಿತ ಬಿಳಿಬಣ್ಣದ ಲೇಪನ ಮಾಡಿ ಅದರ ಮೇಲೆ ಕೆಮ್ಮಣ್ಣಿನ ಬಣ್ಣದಲ್ಲಿ ಚಿತ್ರಗಳನ್ನು ಬಿಡಿಸಿದ್ದು ಬಾದಾಮಿಯಲ್ಲೊಂದು ಮತ್ತು ಮಾನ್ವಿ (ರಾಯಚೂರು ಜಿಲ್ಲೆ)ಯಲ್ಲಿ ಮಾತ್ರ ಸಿಕ್ಕಿವೆ. ಇಲ್ಲಿ ಗಮನಿಸಬೇಕಾದ ಒಂದು ವಿಷಯವೆಂದರೆ, ಇವೆರಡು ಚಿತ್ರಗಳು ಸೌಂದರ್ಯ ದೃಷ್ಟಿಯುಳ್ಳ ಸಾಮಾನ್ಯ ವ್ಯಕ್ತಿಗಳಿಂದ ಒಂದು ಮಿತಿಯೊಳಗೆ ಸಿದ್ಧವಾದುವಲ್ಲ. ಈ ಕಲೆಯ ಪರಂಪರೆಯಲ್ಲಿ ಅಭ್ಯಾಸ ಸಾಧನೆಗಳನ್ನು ನಡೆಸಿ ಪರಿಣಿತಿಯನ್ನು ಪಡೆದು ಮತ್ತು ಸಾಮಾಜಿಕ ಇಲ್ಲವೆ ಧಾರ್ಮಿಕ ವಿಷಯವನ್ನು ವಸ್ತುವನ್ನಾಗಿಟ್ಟುಕೊಂಡು ಕ್ರಮಬದ್ಧವಾಗಿ ಬಿಡಿಸಿದ ಉತ್ತಮ ಚಿತ್ರಗಳು. ಆದ್ದರಿಂದ ಗವಿ ಬಂಡೆ ಚಿತ್ರಗಳ ಐತಿಹಾಸಿಕ ಅನುಕ್ರಮದಲ್ಲಿ ಇವು ಅಪವಾದಗಳೆಂದೆ ಭಾವಿಸಬೇಕು. ಪ್ರಾಗಿತಿಹಾಸ ಕಾಲದಿಂದ ಬಂದ ಗವಿ ವರ್ಣಚಿತ್ರ ಪರಂಪರೆಯ ಪ್ರಭಾವವು ಶಿಷ್ಟ ಸಂಪ್ರದಾಯದ ಕಲಾವಿದನ ಮೇಲೆ ಬೀರಿದಂತೆ ಕಾಣುತ್ತದೆ.

## ಚಿತ್ರಗಳ ಉದ್ದೇಶ

ಈ ರೀತಿ ಗವಿಗಳಲ್ಲಿ, ಬಂಡೆಗಳಲ್ಲಿ ಚಿತ್ರಗಳನ್ನು ಬಿಡಿಸುವ ಉದ್ದೇಶವಾದರೂ ಏನು? ಪ್ರಾಗೈತಿಹಾಸಿಕ ಕಾಲದ ಜನರಲ್ಲಿ ಸೌಂದರ್ಯ ಪ್ರಜ್ಞೆಯುಳ್ಳ ಕೆಲವರು ನಿಸರ್ಗದಲ್ಲಿ ತಾವು ನೋಡಿದ ಪ್ರಾಣಿಗಳ ಗಾಂಭೀರ್ಯ, ಚೆಲುವಿನಿಂದ ಭಾವೋದ್ರೇಕಿತರಾಗಿ ಇಂತಹ ಚಿತ್ರಗಳನ್ನು ಬಿಡಿಸಿದರೆ? ಹಾಗಿದ್ದಲ್ಲಿ ಇವು 'ಕಲೆಯು ಕಲೆಗೋಸ್ಕರ' ಎಂಬ ನಾಣ್ಣುಡಿಯಂತಿವೆ. ಇದೇ ಉದ್ದೇಶವಾಗಿದ್ದಲ್ಲಿ ಕೇವಲ ಪ್ರಾಣಿಗಳೇ ಏಕೆ, ನಿಸರ್ಗದ ಹೂವು ಗಿಡಮರಗಳು, ಬೇರೆ ಬೇರೆ ಪ್ರಾಣಿಗಳು, ಪಕ್ಷಿಗಳು, ಅವುಗಳ ವಿವಿಧ ಭಂಗಿಗಳು, ನದಿ, ಬೆಟ್ಟ, ತಮ್ಮ ಜನ, ನೆಲೆ, ಇವುಗಳು ಬಂದೊಂದು ಕಾಲದಲ್ಲಿ ಒಬ್ಬೊಬ್ಬರ ವಸ್ತುವಾಗಿರಬಹುದಿತ್ತು. ಇದರಿಂದ ಚಿತ್ರಗಳು ವರ್ಣಿಸಲಾರದಷ್ಟು ವೈವಿಧ್ಯಮಯವಾಗಿರುತ್ತಿದ್ದವು. ಮತ್ತು ಈ ಕಲೆಯ ವಿಧಾನ, ತಂತ್ರ, ವರ್ಣ ಸಂಯೋಜನೆಗಳಲ್ಲೂ ವಿವಿಧ ಪ್ರಕಾರಗಳ ಪ್ರಗತಿಯಿರುತ್ತಿತ್ತು. ಆದರೆ ಈ ಚಿತ್ರಗಳಲ್ಲಿ ಹೆಚ್ಚಾಗಿ ಪ್ರಾಣಿಗಳು ಅವುಗಳಲ್ಲೂ ಕೆಲವೇ ಪ್ರಾಣಿಗಳಿವೆ. ಮನುಷ್ಯನ ಚಿತ್ರಗಳಲ್ಲಿ ಸಮೂಹ ನೃತ್ಯ, ಮೈಮೇಲೆ ಚಿತ್ರ ಬರೆದುಕೊಂಡ ನಗ್ನವ್ಯಕ್ತಿ, ಆಯುಧ, ಪ್ರಾಣಿಗಳು ಹೀಗೆ ಕೆಲವೇ ತರಹದ್ದು ಇವೆ. ಮತ್ತು ಇವುಗಳ ಬಾಹ್ಯರೇಖೆ ಅಥವಾ ಛಾಯಾಚಿತ್ರಗಳು ಮಾತ್ರ ಇವೆ. ವಸ್ತುವಿನ ಸಹಜ ಲಕ್ಷಣಗಳನ್ನು ಬಿಡಿಸಲು ಸಾಧ್ಯವಾಗದೆ ಹೀಗೆ ಮಾಡಿದುದಲ್ಲ; ಉದ್ದೇಶಪೂರ್ವಕವಾಗಿಯೇ ಚಿತ್ರಗಳನ್ನು ಈ ಕ್ರಮದಲ್ಲಿಯೇ ಬಿಡಿಸಲಾಗಿದೆ. ಇವುಗಳಲ್ಲಿ ಕೆಲವಂತೂ ಸುಲಭವಾಗಿ ಹೋಗಿ

ನೋಡುವಂತಹ ಸ್ಥಳಗಳಲ್ಲಿಲ್ಲ. ಸ್ವಸಂತೋಷಕ್ಕೋಸ್ಕರ ಮಾತ್ರವಲ್ಲದೆ ತಮ್ಮ ಸಮಾಜದ ಜನರೂ ನೋಡಲೆಂದು ಮಾಡಿದ್ದರೆ ಎಲ್ಲರಿಗೂ ನೋಡಲು ಆಗುವಂತಹ ಸ್ಥಳಗಳಲ್ಲಿ ಇವು ಇರುತ್ತಿದ್ದವೆಂದು ನನ್ನ ಅಭಿಪ್ರಾಯ. ಪ್ರಾಯಶಃ ಇಂತಹ ಬಹಳಷ್ಟು ಚಿತ್ರಗಳನ್ನು ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲು ಪ್ರಾಗೈತಿಹಾಸಿಕ ಮಾನವರು ತಮ್ಮ ತಮ್ಮ ಸಮಾಜದ ನಂಬಿಕೆಗಳಂತೆ ಮಾಂತ್ರಿಕ ಕಟ್ಟಳೆಗಳನ್ನು ನಡೆಸುವ ಕಾಲದಲ್ಲಿ ಅವುಗಳ ಅಂಗವಾಗಿ ರೂಪಿಸಿದ ಚಿತ್ರಗಳೆಂದು ತಜ್ಞರು ತರ್ಕಿಸಿದ್ದಾರೆ. ಒಬ್ಬ ಮನುಷ್ಯನ ಅಥವಾ ಪ್ರಾಣಿಯ ಛಾಯಾಚಿತ್ರಗಳನ್ನು ತೆಗೆದು ಮಂತ್ರಿಸಿದರೆ ಅವನು ಅಥವಾ ಅದು ತನ್ನ ವಶವಾಗುವುದೆಂಬ ಅಥವಾ ಅವನು ಶತ್ರುವಾಗಿದ್ದರೆ ನಾಶವಾಗುವನೆಂಬ ನಂಬಿಕೆ ಬಹು ಪುರಾತನ ಕಾಲದಿಂದ ಉಳಿದು ಬಂದಿರುವಂತಹದು. ತನ್ನ ಶತ್ರುವಿನ ನಾಶಕ್ಕಾಗಿ ಅವನ ಗೊಂಬೆಯನ್ನು ಮಾಡಿ ಅದಕ್ಕೆ ಮಂತ್ರಪೂರಿತ ಸೂಜಿಗಳನ್ನು ಚುಚ್ಚುವುದು ಮೊದಲಾದ ಮಾಟಮಂತ್ರಗಳ ಆಚರಣೆ ಇಂದಿಗೂ ವ್ಯವಹಾರದಲ್ಲಿವೆ. ಇದರಿಂದ ಆ ಶತ್ರುವು ಕಷ್ಟ, ನಷ್ಟ, ಸಂಕಟವನ್ನು ಅನುಭವಿಸಿ ಸಾಯುವನು ಎಂಬ ಬಲವಾದ ನಂಬಿಕೆಯಿದೆ. ವಿಶ್ವದಲ್ಲೆ ಪ್ರಾಚೀನ ಗ್ರಂಥವಾದ ಋಗ್ವೇದದ (ಕಾಲ ಸು.ಕ್ರಿ.ಪೂ. 2000 ಎಂದು ಬಹುಮಟ್ಟಿನ ಅಭಿಪ್ರಾಯ) ಹತ್ತನೇ ಮಂಡಲದಲ್ಲಿ ಇಂತಹ ವಾಮಾಚಾರಗಳಿಗೆ ಸಂಬಂಧಪಟ್ಟ ಅಭಿಚಾರ ಮಂತ್ರಗಳಿವೆ. ಅಥರ್ವಣವೇದದಲ್ಲಿ ಹೆಚ್ಚಾಗಿವೆ. ತಲೆ ತಲಾಂತರಗಳಿಂದ ಬೇರೂರಿ ಬೆಳೆದುಬಂದ ಇಂತಹ ನಂಬಿಕೆಗಳು ಈಗಲೂ ಕೆಲವೆಡೆಗಳಲ್ಲಿ ಇವೆ.

ಈ ಚಿತ್ರಗಳಲ್ಲಿ ನಗ್ನ ಮನುಷ್ಯನು ಮೈತುಂಬ ಚಿತ್ರಗಳನ್ನು ಬರೆದುಕೊಂಡು ಅಥವಾ ಮುಖವಾಡ ಹಾಕಿಕೊಂಡಿರುವದನ್ನು ಹಾಗೂ ಕೈಗಳನ್ನು ಮೇಲಕ್ಕೆತ್ತಿ ತೊಡೆಗಳನ್ನು ಅಗಲಿಸಿ ನಿಂತಿರುವ ಭಂಗಿಯನ್ನು ನೋಡಿದರೆ, ಅವನೊಬ್ಬ ಮಾಂತ್ರಿಕ ಮನುಷ್ಯನೆಂದೇ ತಿಳಿಯಬೇಕಾಗುತ್ತದೆ. ಈಗಲೂ ಆದಿವಾಸಿಗಳಲ್ಲಿ, ಗಿರಿಜನರಲ್ಲಿ ಅವರ ಧಾರ್ಮಿಕ ಆಚರಣೆಗಳನ್ನು ನಡೆಸುವವನು ವಿವಿಧ ವೇಷಗಳನ್ನು ಧರಿಸುವುದುಂಟು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಗಲೂ ಸಾಮಾನ್ಯ ಜನರಲ್ಲಿ ಭೂತಾರಾಧನೆ ಒಂದು ಪ್ರಧಾನ ಧಾರ್ಮಿಕ ವಿಧಿ. ಇದರ ಪೂಜಾರಿಯು ಪೂಜೆಯ ವೇಳೆಗೆ ವಿಶಿಷ್ಟ ವೇಷ ಭೂಷಣಗಳನ್ನು ಧರಿಸುವನು. ಇವನ ಮೈಮೇಲೆ ಆ ದೇವತೆ ಆವೇಶವಾಗಿ ತನ್ನ ಸಮಾಜದ ಜನರ ಕುಂದು ಕೊರತೆಗಳಿಗೆ ಸಮಾಧಾನವನ್ನು ಹೇಳುವುದು. ಇದಲ್ಲದೆ ಮಾಟ–ಮಂತ್ರ ಮಾಡುವ ಮಾಂತ್ರಿಕರೂ ಇದ್ದಾರೆ. ಇದರಂತೆಯೆ ಬೆನ್ನಿಗೆ ಬಾಣ ನಾಟಿರುವ ಜಿಂಕೆ, ಗಬ್ಬದ ಜಿಂಕೆ, ಪ್ರಾಣಿಗಳ ಮನುಷ್ಯರ ಛಾಯಾ ಚಿತ್ರಗಳು, ಸಂಭೋಗ ಕ್ರಿಯೆ, ಬಹುಶಃ ಬೇಟೆಗೆ ಹೋಗುವ ಮುನ್ನ ಸಾಮೂಹಿಕ ನೃತ್ಯ, ಮೊದಲಾದ ಚಿತ್ರಗಳು ತನ್ನ ಆಹಾರವನ್ನು ಒದಗಿಸುವ ಜಿಂಕೆ, ಗೂಳಿ, ಕೋಣ ಹಾಗೂ ತನ್ನ ವಂಶಾಭಿವೃದ್ಧಿಗೋಸ್ಕರ ಇಂತಹ ಪ್ರಾಣಿಗಳ ವೈರಿಯಾದ ಹುಲಿ, ಚಿರತೆ ಮೊದಲಾದ ಪ್ರಾಣಿಗಳ ನಾಶಕ್ಕೋಸ್ಕರ ಮತ್ತು ಬೇಟೆಯಲ್ಲಿ ಇಂತಹ

ಪ್ರಾಣಿಗಳು ವಶವಾಗುವುದಕ್ಕೋಸ್ಕರ ಇಂತಹ ಚಿತ್ರಗಳನ್ನು ಬರೆದು ಮಂತ್ರ ಪುರಸ್ಸರವನ್ನಾಗಿ ಮಾಡುವುದೇ ಈ ಚಿತ್ರಗಳ ಸೃಷ್ಟಿಗೆ ಮುಖ್ಯ ಕಾರಣ. ಈ ಮಾಂತ್ರಿಕ ಕಟ್ಟಳೆಗಳನ್ನು ಸಾಮಾನ್ಯ ಜನರಿಂದ ದೂರವಾದ ಪ್ರದೇಶಗಳಲ್ಲಿ ಮಾಡುತ್ತಿದ್ದರೆಂದು ಕಾಣುತ್ತದೆ. ಈಗಲೂ ಮಾಟ–ಮಂತ್ರಗಳನ್ನು ಗುಪ್ತವಾಗಿ ಮಾಡುವರು. ಆ ಪ್ರಾಗೈತಿಹಾಸಿಕ ಜನರು ಈ ಉದ್ದೇಶಕ್ಕೆ ಚಿತ್ರಗಳನ್ನು ಬರೆದಿದ್ದರೂ ಅದು ಕೇವಲ ಬಾಹ್ಯ ರೂಪರೇಖೆಗಳ ಛಾಯಾಚಿತ್ರಗಳೇ ಆಗಿದ್ದರೂ ಆ ಪ್ರಾಣಿಗಳೊಡನೆ ಅವನಿಗೆ ನಿಕಟ ಸಂಬಂಧವಿದ್ದುದರಿಂದ ಅವುಗಳ ಸ್ವರೂಪ, ನಡವಳಿಕೆ ಬಗೆಗೆ ಅವನು ಹೊಂದಿದ್ದ ಸೂಕ್ಷ್ಮ ಪರಿಚಯದಿಂದ ಹಾಗೂ ಅವನಲ್ಲಿ ಉದ್ಭವಿಸಿದ ಒಂದು ಬಗೆಯ ಅನಿರ್ವಚನೀಯ ಸ್ಫೂರ್ತಿಯಿಂದ ಬಿಡಿಸಿದ ಹಲವಾರು ಚಿತ್ರಗಳು ಶಕ್ತಿಶಾಲಿಯಾಗಿವೆ. ಅವುಗಳ ಸರಳ ಸಹಜ ಅವ್ಯಕ್ತ ಸೌಂದರ್ಯ ನಮ್ಮನ್ನು ಬೆರಗುಗೊಳಿಸುತ್ತದೆ.

## ಕೆಲವು ಮಹತ್ವದ ಚಿತ್ರಗಳು

### 1. ಬಾದಾಮಿ–ಐಹೊಳೆ ಪ್ರದೇಶ

ನೂತನ ಶಿಲಾಯುಗಕ್ಕಿಂತಲೂ ಪೂರ್ವದ್ದು ಎನ್ನಬಹುದಾದ ಗವಿವರ್ಣಚಿತ್ರಗಳು ಬಾದಾಮಿ –ಗುಳೇದಗುಡ್ಡದ ಹಾದಿಯಲ್ಲಿ ಕುಟಕನಕೇರಿ ಹತ್ತಿರದ ಅರೆ ಗುಡ್ಡ ಮತ್ತು ಹಿರೇ ಗುಡ್ಡಗಳಲ್ಲಿ ಬಾದಾಮಿಯ ಉತ್ತರ ಗುಡ್ಡದ ಉತ್ತರಕ್ಕಿರುವ ಬೆಟ್ಟದ ಸಾಲಿನಲ್ಲಿರುವ ಒಂದು ಗವಿಯಲ್ಲಿ ಇವೆ.

ಹಿರೇಗುಡ್ಡ ಮತ್ತು ಅರೆಗುಡ್ಡಗಳಲ್ಲಿಯ ಚಿತ್ರಗಳೆಲ್ಲವೂ ಕೆಮ್ಮಣ್ಣಿನ ರಂಗಿನವು. ಇಲ್ಲಿಯ ಕೆಲವು ಕಲ್ಲಾಸರೆಗಳಲ್ಲಿ ಮನುಷ್ಯನ ಚಿತ್ರಗಳೇ ಹೆಚ್ಚು. ಅತಿರೇಕವಾಗಿ ಉದ್ದುದ್ದವಾದ ಮುಂಡ, ಕಡ್ಡಿಯಂತಹ ಅಥವಾ ಉರುಟಾದ ಕೈಕಾಲುಗಳು, ಮುಖಕ್ಕೆ ಸಾಮಾನ್ಯವಾಗಿ ಮುಖವಾಡ ಹಾಕಿಕೊಂಡಂತೆ ಕಾಣುವುದೇ ಈ ಚಿತ್ರಗಳ ವೈಶಿಷ್ಟ್ಯ. ಮೈಮೇಲೆ ರೇಖಾಚಿತ್ರಗಳು ಇವೆ. ಬಹುಶಃ ಅವರ ಸಮಾಜದ ಧಾರ್ಮಿಕ ಕಟ್ಟಳೆಯಲ್ಲಿ ತೊಡಗಿದ ವ್ಯಕ್ತಿಗಳದ್ದೆಂದು ಕಾಣುತ್ತದೆ. ಇಲ್ಲವೆ ಬೇಟೆಯ ಕಾಲದಲ್ಲಿ ಪ್ರಾಣಿಗಳ ತರಹದ್ದೆ ಮುಖವಾಡ ಹಾಕಿಕೊಳ್ಳುವ ಕ್ರಮವಿದ್ದಿರಬಹುದು. ಈ ಚಿತ್ರಗಳಲ್ಲಿ ಮುಖವಾಡ, ಮೈಬಾಗು ಮತ್ತು ಮುಂಡದ ಮೇಲಿನ ಚಿತ್ರಗಳು ತಕ್ಕಮಟ್ಟಿಗೆ ವೈವಿಧ್ಯಮಯವಾಗಿವೆ. ಈ ರೀತಿಯ ಚಿತ್ರಗಳು ಕರ್ನಾಟಕದ ಬೇರೆಡೆಯಲ್ಲಿ ಇಲ್ಲ. ದೈಹಿಕ ನೀಳತೆಯ ಶೈಲಿಯಲ್ಲಿ ಇವು ಭೀಂಬೆಟ್ಕಾದಲ್ಲಿಯ ಕೆಲವು ಗವಿಗಳಲ್ಲಿಯ ಬಾಣ ಇಲ್ಲವೆ ಗಾಳವನ್ನು ಕೈಯಲ್ಲಿ ಹಿಡಿದು ನಡೆಯುತ್ತಿರುವ ಮನುಷ್ಯ ಚಿತ್ರಗಳಿಗೆ ಬಹುಮಟ್ಟಿಗೆ ಹೋಲುತ್ತವೆ. ಭೀಂಬೆಟ್ಕಾದ ಚಿತ್ರಗಳು ಸೂಕ್ಷ್ಮ ಶಿಲಾಯುಗದ್ದೆಂದು ಸಧ್ಯಕ್ಕೆ ನಿರ್ಣಯಿಸಲಾಗಿದೆ. ಈ ಚಿತ್ರಗಳಲ್ಲದೆ, ಮೈಮೇಲೆ ಪಟ್ಟೆಗಳುಳ್ಳ ಹಾಗೂ ಬಾಲ ಎತ್ತಿಕೊಂಡ ಕಾಡುಬೆಕ್ಕು ಅಥವಾ

ಹುಲಿಯ ಚಿತ್ರ, ಮೀನಿನ ಬಲೆಯಂತೆ ಹೆಣೆದ ರೇಖಾಚಿತ್ರಗಳೂ ಅಲ್ಲಲ್ಲಿ ಇವೆ. ಇವುಗಳಲ್ಲಿ ಹೆಚ್ಚಾಗಿ ಬಾಹ್ಯರೂಪ ರೇಖಾ ಚಿತ್ರಗಳಿವೆ.

ಬಾದಾಮಿಯಿಂದ ಉತ್ತರಕ್ಕೆ ಸುಮಾರು ಐದು ಕಿ.ಮೀ. ದೂರದಲ್ಲಿರುವ 'ಶಿಢ್ಡಫಢಿ'. ಕರ್ನಾಟಕ ಪ್ರಾಗಿತಿಹಾಸ ತಜ್ಞರಿಗೆ ಈಗಾಗಲೇ ಪರಿಚಿತವಾಗಿದೆ. ಒಂದು ಸಾಧಾರಣ ಎತ್ತರದ ಬೆಟ್ಟದ ಶ್ರೇಣಿಯಲ್ಲಿ ಸಾವಿರಾರು ವರ್ಷಗಳ ಹಿಂದೆ ಅಡ್ಡಲಾಗಿ ಕೊರಕಲು ಬಿದ್ದು ದೊಡ್ಡದಾಗುತ್ತ, ಅದು ಕಾಲಾನುಕ್ರಮದಲ್ಲಿ ದಿಡ್ಡಿ ಬಾಗಿಲಿನಂತೆ ಒಂದು ಭವ್ಯ ಕಮಾನು ಆಗಿದೆ. ಇದರಡಿಯ ಎರಡು ಬದಿಗಳಲ್ಲಿ ಮಬ್ಬು ಬಿಳಿಬಣ್ಣದ ಹಾವು, ಗುಬ್ಬಚ್ಚಿ, ಆನೆ, ಮನುಷ್ಯ ಮೊದಲಾದ ಚಿತ್ರಗಳಿವೆ. ಅಲ್ಲದೆ ಸುಮಾರು 5ನೇ ಶತಮಾನದ್ದೆಂದು ಹೇಳಬಹುದಾದ, ಬಿಡಿಸಲು ಸುಲಭವಲ್ಲದ ಬರವಣಿಗೆಯ ಒಂದೆರಡು ಸಾಲುಗಳಿವೆ. ಇವುಗಳಲ್ಲಿಯ ಅಕ್ಷರಗಳನ್ನು ತಜ್ಞರು 'ಶಂಖಲಿಪಿ'ಯೆಂದು ಕರೆಯುತ್ತಾರೆ. ಈ ಕಮಾನಿನ ಎದುರು ಒಂದು ಬಯಲು ಬಂಡೆಯ ಮೇಲೆ ಎದುರು–ಬದುರು ನಿಂತ ಎರಡು ಕೋಣಗಳು, ಬಹು ದೂರದಲ್ಲಿ ನಿಂತಿರುವ ಆನೆಯ ತರಹದ ಚಿತ್ರಗಳಿವೆ. ಪ್ರಾಣಿಗಳ ಚಿತ್ರಗಳು ಅತ್ಯಂತ ಸ್ವೈಜವಾಗಿವೆ. ಬಹುದೂರದಲ್ಲಿ ಆನೆ ನಿಂತಿದೆ ಎಂಬುದನ್ನು ಆ ಎರಡು ಕಾಡುಕೋಣಗಳಿಗಿಂತ ಅತಿ ಸಣ್ಣ ಆಕಾರದಲ್ಲಿ ತೋರಿಸುವುದರ ಮೂಲಕ ಸೂಚಿಸಿದೆ.

ಬಾದಾಮಿಯ 1ನೇ ವರ್ಣಚಿತ್ರ ಗವಿಯಿಂದ ಶಿಢ್ಡಫಢಿಗೆ ಹೋಗುವ ದಾರಿಯಲ್ಲಿ 'ಸಿತಿದೊಣಿ' ಹತ್ತಿರ ಬೃಹದಾಕಾರದ ಸುಮಾರು 5–6 ಮೀ. ಎತ್ತರದ ಹಾಗೂ ಹೆಚ್ಚು ಕಡಿಮೆ ಅಷ್ಟೇ ಅಗಲದ ಒಂದು ಕಲ್ಲಾಸರೆ ಇದೆ. ನೆಲದಿಂದ ಸುಮಾರು 2 ಮೀ. ಎತ್ತರದಿಂದ ಮೇಲೆ ಇಡೀ ಕಲ್ಲಾಸರೆಯು ಚಿತ್ರಗಳಿಂದ ತುಂಬಿಹೋಗಿದೆ. ಚಿತ್ರಗಳಲ್ಲಿ ಅಂತಹ ವೈವಿಧ್ಯತೆಯೇನೂ ಇಲ್ಲ. ಬಲೆಯಂತಹ ರೇಖಾಚಿತ್ರವು ಒಳಗೆಲ್ಲ ಹಬ್ಬಿದೆ. ಇದರಲ್ಲಿ ಒಂದು ಬಲಿಷ್ಠ ಕೋಣ ಒಂದು ಜಿಂಕೆಯಂತೆ ಕಾಣುವ ಅಸ್ಪಷ್ಟ ಚಿತ್ರಗಳಿವೆ. ಕೋಣವು (?) ಮಾದರಿಯಲ್ಲಿ ಅಲ್ತಮೀರ (ಸ್ಪೇನ್) ಗವಿಯ ಕೋಣಗಳಿಗೆ ಹೋಲುತ್ತದೆ. ಬಲೆಯಂತಹ ಚಿತ್ರದಡಿಯಲ್ಲಿ ಈ ಪ್ರಾಣಿಗಳನ್ನು ತೋರಿಸಿರುವುದರ ಉದ್ದೇಶವೇನು? ಬಲೆಹಾಕಿ ಈ ಪ್ರಾಣಿಗಳನ್ನು ಹಿಡಿಯುತ್ತಿದ್ದ ಕ್ರಮದ ಸಂಕೇತವೇ? ಬಲಿಷ್ಠ ಕಾಡುಕೋಣವನ್ನು ಬಲೆಹಾಕಿ ಹಿಡಿಯಲು ಸಾಧ್ಯವೇ? ಅಥವಾ ಬಲೆಯಲ್ಲಿ ಸಿಕ್ಕ ಪ್ರಾಣಿಯಂತೆ ಅಂತಹ ಮಾಂತ್ರಿಕ ಚಿತ್ರಗಳಿಂದ ಅವು ಮಂತ್ರಮುಗ್ಧವಾಗಿ ಸುಲಭವಾಗಿ ಹಿಡಿತಕ್ಕೆ ಸಿಗಲು ಸಾಧ್ಯವೆಂಬುದರ ನಂಬಿಕೆಯ ಸಂಕೇತವೆ? ಹೆಚ್ಚಿನ ಸಂಶೋಧನೆಯಿಂದ ಇದರ ನಿಜವಾದ ಅರ್ಥವನ್ನು ಕಂಡು ಹಿಡಿಯಲು ಸಾಧ್ಯವಾಗಬಹುದು.

ರಾಮದುರ್ಗದ ಪಶ್ಚಿಮಕ್ಕೆ 4 ಕಿ.ಮೀ. ದೂರದಲ್ಲಿ 'ಮೇಗುಂಡೇಶ್ವರ' ದೇವಾಲಯದ ಬಳಿ

'ಖಾಜಿ ಗುಡ್ಡ'ದಲ್ಲಿಯ ಜರುಗಿನ ದಾರಿ ಹತ್ತಿರದ ಕಲ್ಲಾಸರೆಗಳಲ್ಲಿ ನವಿಲು, ಜಿಂಕೆ, ಮೊಸಳೆ (?) ಗೂಳಿ ಮೊದಲಾದವುಗಳ ಸುಮಾರು 22 ಚಿತ್ರಗಳಿವೆ. ಜಿಂಕೆಯ ಮೈಮೇಲೆ ಸಾಲು ಚುಕ್ಕೆಗಳನ್ನು ನಿರ್ದೇಶಿಸುವ ಸಮಾನಾಂತರ ಅಡ್ಡಗೆರೆಗಳಿವೆ.

ಇವುಗಳು ಇದ್ದು ಸ್ಥಳ ಮತ್ತು ಶೈಲಿ, ಪ್ರಧಾನವಾಗಿ ಪ್ರಾಣಿಗಳನ್ನು ಹಾಗೂ ಅವುಗಳನ್ನು ಬೇಟೆಯಾಡುವುದಕ್ಕೋಸ್ಕರ (?) ಮುಖವಾಡ ಹಾಕಿಕೊಂಡ ಮನುಷ್ಯರನ್ನು ಚಿತ್ರಿಸುವ ಪದ್ಧತಿ–ಇವುಗಳ ಆಧಾರದ ಮೇಲೆ ಇವೆಲ್ಲ ಚಿತ್ರಗಳು ಸೂಕ್ಷ್ಮ ಶಿಲಾಯುಗ (ಕ್ರಿ.ಪೂ. ಸು. 10000–5000), ಹಾಗೂ ಪ್ರಾಯಶಃ ಇದಕ್ಕಿಂತಲೂ ಪೂರ್ವಕಾಲದ ಅತ್ಯಂತ ಹಳೇ ಶಿಲಾಯುಗದ್ದೆಂದು (Upper Palaeolithic, ಕ್ರಿಪೂ.ಸು. 40,000–10000) ಊಹಿಸಬಹುದು.

## 2. ರಾಯಚೂರು–ಬಳ್ಳಾರಿ ಪ್ರದೇಶ

ಹಿರೆಬೆನಕಲ್ಲಿನ 12 ಗವಿಚಿತ್ರಗಳಲ್ಲಿ 12ನೇ ಗವಿ ಚಿತ್ರ ಈ ಪ್ರದೇಶದಲ್ಲೇ ವಿಶಿಷ್ಟವಾಗಿದೆ. ಹಲವಾರು ಕಿ.ಮೀ. ಉದ್ದ ಅಗಲದ ಬೆಟ್ಟದ ತುಟ್ಟತುದಿಯಲ್ಲಿ ದುರ್ಗಮವಾದ ಭಾಗದಲ್ಲಿಯ ಒಂದು ಗವಿಯಲ್ಲಿ ಈ ಚಿತ್ರಗಳಿವೆ. ಬೆಟ್ಟದ ಈ ಭಾಗಕ್ಕೆ "ದುರ್ಗದ ದಡಿ'' ಎಂದು ಸ್ಥಳೀಯ ಹೆಸರು. ಬೆಟ್ಟದ ಸುಮಾರು ಮಧ್ಯ ಅಂತರದಲ್ಲಿ ಒಂದು ಬಯಲು ಪ್ರದೇಶ. ಇಲ್ಲಿ ಬೃಹತ್ ಶಿಲಾ ಸಂಸ್ಕೃತಿ ಜನರ ವಾಸ್ತವ್ಯವಿದ್ದ ಕುರುಹುಗಳು ವಿಪುಲವಾಗಿವೆ. ಬೂದಿಮಿಶ್ರಿತ ಮಣ್ಣಿನ ಕೆಂಪು, ಕೆಂಪು–ಕಪ್ಪು ದ್ವಿವರ್ಣದ ಮತ್ತು ಕಪ್ಪು ಬಣ್ಣದ ಮೃತ ಪಾತ್ರೆಗಳ ಅವಶೇಷಗಳು ಹೇರಳವಾಗಿವೆ. ಇದಲ್ಲದೆ ಸುಟ್ಟ ಮಣ್ಣಿನ ಮಣಿಗಳು, ಬಳೆಚೂರುಗಳು ಮುಂತಾದ ಇತರ ಅವಶೇಷಗಳೂ ಇವೆ. ಇದರ ಸಮೀಪದಲ್ಲೆ ಸ್ವಲ್ಪ ಕೆಳಗೆ 6ನೇ ಮತ್ತು 11ನೇ ವರ್ಣಚಿತ್ರಗಳಿವೆ. ಸ್ವಲ್ಪ ಕೆಳಗೆ 6ನೆಯ ವರ್ಣ ಚಿತ್ರಗವಿ ಅಲ್ಲಿಂದ ಸ್ವಲ್ಪ ಮುಂದಕ್ಕೆ ಸುಮಾರು ಬೃಹತ್ ಶಿಲಾ ಗೋರಿಗಳಿವೆ. ಸುತ್ತಮುತ್ತಲಿನ ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ 12ನೇ ಚಿತ್ರಗವಿಯಲ್ಲಿಯ ಚಿತ್ರಗಳನ್ನು ತಿಳಿದುಕೊಳ್ಳುವಾ.

ಈ ಗವಿಯೊಳಗೆ ಬಂಡೆಗಳ ಸಂದಿಗಳಿಂದ ಸ್ವಲ್ಪ ಸ್ವಲ್ಪ ಬೆಳಕು ಬರುತ್ತದೆ. ಮೇಲಿನ ಬಂಡೆಯ ಕೆಳಮೈ ಮೇಲೂ ಹಿಂಬದಿಯ ಮೇಲೂ, ಅದರ ಎಡಬದಿಯ ಬಂಡೆಯ ಮೇಲೆ ಚಾಚಿದ ಮತ್ತೊಂದು ಬಂಡೆಯ ಕೆಳಮೈ ಮೇಲೂ ಆ ಬಂಡೆಯ ಮೇಲಿನ ಮತ್ತೆರಡು ಬಂಡೆಗಳ ಸಂದಿಯಲ್ಲಿಯ ಒಂದರ ಮೇಲೆ ಸ್ವಾರಸ್ಯಕರವಾದ ಚಿತ್ರಗಳಿವೆ. ಒಟ್ಟಿನಲ್ಲಿ ಐದು ಕಡೆಗಳಲ್ಲಿ ಇವೆ. ಕುದುರೆಸವಾರರು, ಕುಣಿತದವರ ಗುಂಪು, ಚಿಗರೆಗಳ ಸಾಲು, ಎತ್ತು ದನಗಳು, ನವಿಲು ಇವೆ ಮೊದಲಾದ ಚಿತ್ರಗಳು.

ಎರಡು ಬಂಡೆಗಳ ಸಂದಿಯಲ್ಲಿ ಪಶ್ಚಿಮ ದಿಕ್ಕಿಗೆ ಎದುರಾಗಿರುವ ಬಂಡೆಯ ಮೇಲಿನ ಚಿತ್ರದಲ್ಲಿ 27 ಜನರು ಕೈ ಕೈ ಹಿಡಿದುಕೊಂಡು ಸಾಲಾಗಿ ನಿಂತಿದ್ದಾರೆ. ಬಲಕ್ಕಿರುವ ವ್ಯಕ್ತಿ ಹುಡುಗನೆಂದು ಹೇಳಬಹುದು. ಒಂದು ಬಂದಿಯಲ್ಲಿರುವವನು ಕೈಯಲ್ಲಿ ಏನನ್ನೊ ಹಿಡಿದಿದ್ದಾನೆ. ಮತ್ತೊಂದು ಬದಿಯಲ್ಲಿ ಅಸ್ಪಷ್ಟ ಚಿತ್ರವಿದ್ದು ಪಾದಗಳ ಕೆಳಗೆ ಉದ್ದಕ್ಕೂ ಎರಡು ಗೆರೆಗಳಿವೆ. ಈ ಸಾಲಿನ ಮೇಲೆ ಒಂದೆರಡು ಅಸ್ಪಷ್ಟ ಚಿತ್ರಗಳಿವೆ. ಕೊನೆಯವನ ತಲೆಯ ಮೇಲೆ ಮೇಲ್ಮುಖವಾಗಿ ಓರೆಗೆರೆಗಳಿವೆ.

ಮುಂಚಾಚಿದ ಬಂಡೆಯ ಕೆಳಮೈಯ ಮೇಲೆ, ಒಬ್ಬ ನಿಂತ ಮನುಷ್ಯನ ಚಿತ್ರವೂ ಅರ್ಧ ಚಂದ್ರಾಕೃತಿಯ ಗೆರೆಯ ಮೇಲೆ ನಿಂತ 12 ಮನುಷ್ಯರ ಮತ್ತೊಂದೆಡೆಯಲ್ಲಿ ಜೋಡಿ ಮನುಷ್ಯರ, ಒಬ್ಬ ಮನುಷ್ಯನು ಒಂದು ಗೂಳಿಯನ್ನು ಚಪ್ಪರಿಸುತ್ತಿರುವ ಚಿತ್ರಗಳಿವೆ. ಇದೇ ಭಾಗದ ಒಂದೆಡೆಯಲ್ಲಿ ಕುದುರೆ ಸವಾರರ ಚಿತ್ರಗಳಿವೆ.

ಗವಿಯ ಮೇಲಿನ ದೊಡ್ಡ ಬಂಡೆಯ ಕೆಳಮೈಯಲ್ಲಿ ಒಬ್ಬ ನಗ್ನ ಮನುಷ್ಯನ, ಗಂಡುಗೊಡಲಿ ಹಿಡಿದ ಒಬ್ಬ ಕುದುರೆ ಸವಾರನ, ಮೂರು ವ್ಯಕ್ತಿಗಳ ಸಾಲಿನಲ್ಲಿ ಬಲಗಡೆ ಕೊನೆಯವನ ಉದ್ದನೆ ತಲೆಗೂದಲು ಹಿಡಿದುಕೊಂಡ ಒಬ್ಬ ಎತ್ತರದ ಮನುಷ್ಯ, ಉದ್ದನೆ ಕೋಡುಳ್ಳ ಎತ್ತು, ಕೈ ಕೈ ಹಿಡಿದುಕೊಂಡ ಇಬ್ಬರು ವ್ಯಕ್ತಿಗಳ ಸಂಭೋಗ ಇವೇ ಮೊದಲಾದ ಚಿತ್ರಗಳಿವೆ. ವ್ಯಕ್ತಿಗಳ ಸಾಲಿನಲ್ಲಿ ಎಡಗಡೆಗೆ ಮನುಷ್ಯನ ತಲೆಗೂದಲು ನೆಟ್ಟಗೆ ನಿಂತಿವೆ. ಮತ್ತು ಬಲಗಡೆ ಮುಖಮಾಡಿದ ಹತ್ತು ಜಿಂಕೆಗಳ ಸಾಲು, ಉದ್ದನೆ ಕೋಡುಗಳುಳ್ಳ ಎತ್ತು, ಕುದುರೆಸವಾರರು, ಒಂದರಲ್ಲಿ ಏಳು ಮತ್ತೊಂದರಲ್ಲಿ ಆರು ನಿಂತ ವ್ಯಕ್ತಿಗಳ ಎರಡು ಸಾಲುಗಳು, ನಿಂತ ಮನುಷ್ಯ, ಕುದುರೆ ಸವಾರ, ಎಂಟು ಜಿಂಕೆಗಳ ಸಾಲು, ಕುಚ್ಚಿನಂಥ ಬಾಲವಿರುವ ಪ್ರಾಣಿ ಮತ್ತು ಎರಡು ಎತ್ತು(?)ಗಳಿವೆ. ಎರಡನೇ ಸಾಲಿನಲ್ಲಿ ಎಡಗಡೆಯಿಂದ ಮೂರನೆ ವ್ಯಕ್ತಿ ಪ್ರಾಯಶಃ ಹೆಂಗಸಿರಬೇಕು.

ಈ ಬಂಡೆಯ ಕೆಳಗಿರುವ ಬಂಡೆಯ ಮೇಲೆ ಮೇಲಿಂದ ಕೆಳಗಿನವರೆಗೆ ಹಲವಾರು ಚಿತ್ರಗಳಿವೆ. ಅಸ್ಪಷ್ಟ ಪ್ರಾಣಿ(?), ನವಿಲು, ಎತ್ತುಗಳು, ಒಂದು ಕುದುರೆಯ ಮೇಲೆ ನಿಂತ, ಇನ್ನೊಂದು ಕುದುರೆಯ ಮೇಲೆ ಕುಳಿತ ಇಬ್ಬರು ಸವಾರರು, ಕುದುರೆ ಸವಾರರ ಸಾಲು, ಆಯುಧಪಾಣಿಯಾದ ಮನುಷ್ಯ, ಬಿಲ್ಲು ಹಿಡಿದ ಮನುಷ್ಯನ ಮುಂದೆ ಕುದುರೆ ಸವಾರ, ಮತ್ತೊಬ್ಬ ಕುದುರಿ ಸವಾರ, ಎತ್ತುಗಳು ಮತ್ತು ಒಬ್ಬ ಮನುಷ್ಯ: ಹೀಗೆ ಹಲವಾರು ಚಿತ್ರಗಳಿವೆ. ಜಿಂಕೆಗಳ ಬಾಲ ತುಂಬಾ ಕೂದಲಿನಿಂದ ಕೂಡಿದೆ. ಈ ಬೆಟ್ಟದಲ್ಲಿ ಇದುವರೆಗೂ 12 ಗವಿಚಿತ್ರಗಳು ಶೋಧವಾಗಿವೆಯೆಂದು ಮೇಲೆ ಹೇಳಿದೆಯಷ್ಟೆ 1,4 ಮತ್ತು 6ನೇ ಗವಿ ಚಿತ್ರಗಳಲ್ಲಿ ಜಿಂಕೆಗಳ, ನವಿಲಿನ, ಕುದುರಿ ಸವಾರರ ಮತ್ತು ಸಾಲು ಮನುಷ್ಯರ ಚಿತ್ರಗಳೂ ಇವೆ. ಆದರೆ ಮೇಲೆ ವಿವರಿಸಿದ 12ನೇ ಗವಿ ವರ್ಣಚಿತ್ರಗಳು ಕೆಲವೊಂದು ರೀತಿಯಲ್ಲಿ ವಿಶಿಷ್ಟವಾಗಿವೆ. ಕುದುರೆ ಸವಾರರನ್ನು

ಮತ್ತು ಜಿಂಕೆಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಒಂದರ ಹಿಂದೆ ಒಂದರಂತೆ ನೇರ ಸಾಲಿನಲ್ಲಿ ಚಿತ್ರಿಸಿರುವುದು, ಸ್ತ್ರೀ ಪುರುಷ ಮತ್ತು ಲೈಂಗಿಕ ಕ್ರಿಯೆಯನ್ನು ದಿಟ್ಟವಾಗಿ ತೋರಿಸಿರುವುದು. ಕುದುರೆ ಸವಾರರಲ್ಲಿ ಕುದುರೆಗಳ ಲಗಾಮನ್ನು ತೋರಿಸಿರುವ ರೀತಿ ಮಾತ್ರ ವಿಚಿತ್ರವಾಗಿದೆ. ಕುದುರೆ ಬಾಯಲ್ಲಿಯ ಕಡಿವಾಣದಿಂದ ಲಗಾಮು ಕುತ್ತಿಗೆ ಕೆಳಗಿನಿಂದ ಮೇಲೆ ಹಾಯದೆ ತಲೆಯ ಮೇಲೆ ಹಾದು ಸವಾರನ ಕೈಯಲ್ಲಿದೆ. ಲಗಾಮು ಹಗ್ಗೆದ್ದಾಗಿರದೇ ಲೋಹದ ತಂತಿಯದಿದ್ದಿರಲೇಬೇಕು. ಅಂತೂ ಈ ಕ್ರಮ ವಿಶಿಷ್ಟವಾಗಿದೆ. ಇದು ದಕ್ಷಿಣ ಸ್ವೀಡನ್ನಿನ ಕೀವಿಕ್ ಎಂಬಲ್ಲಿಯ ಕಂಚಿನ ಯುಗದ ಒಂದು ಕಲ್ಗೋರಿಯ ಮೇಲೆ ಮೂಡಿಸಿದ ಗಾಡಿ ಎಳೆಯುತ್ತಿರುವ ಕುದುರೆಗಳ ಲಗಾಮಿನ ರೀತಿಯನ್ನು ಬಹುಮಟ್ಟಿಗೆ ಹೋಲುತ್ತದೆ. ಆದ್ದರಿಂದ ಈ ಕ್ರಮ ಬಹಳ ಪ್ರಾಚೀನವಾದದ್ದು ಎಂದು ಹೇಳಬಹುದು.

ಜಿಂಕೆಗಳ ಸಾಲಿನಲ್ಲಿ ಪ್ರತಿಯೊಂದು ಜಿಂಕೆಯ ಆಕಾರ, ದೇಹದ ಪ್ರಮಾಣಬದ್ಧತೆ ಒಂದೇ ರೀತಿಯಲ್ಲಿರುವುದು ನಿಜಕ್ಕೂ ಆಶ್ಚರ್ಯಕರ. ಮೇಲೆ ಹೇಳಿದಂತೆ ಈಗಿನ ಹಾಗೆ ಒಂದು ತಗಡಿನಲ್ಲೊ ರಟ್ಟಿನಲ್ಲೊ ಬೇಕಾದ ಚಿತ್ರವನ್ನು ಕತ್ತರಿಸಿ ಅದನ್ನು ಗೋಡೆಯ ಮೇಲಿಟ್ಟು ಕತ್ತರಿಸಿದ ಭಾಗವನ್ನಷ್ಟು ಬಣ್ಣದಿಂದ ಬಳಿದು ತೆಗೆದ ಚಿತ್ರದ ಹಾಗಿವೆ. ಈ ಕ್ರಮದಲ್ಲಿ ತೆಗೆದ ಎಲ್ಲ ಚಿತ್ರಗಳು ಒಂದೇ ಪ್ರಕಾರವಾಗಿರುತ್ತವೆ. ಮೇಲೆ ಹೇಳಿದ ಸಾಲಿನಲ್ಲಿರುವ ಜಿಂಕೆ ಚಿತ್ರಗಳು ಮೇಲ್ನೋಟಕ್ಕೆ ಈ ರೀತಿ ಒಂದೇ ತರಹ ಇವೆ. ಬಹುಸೂಕ್ಷ್ಮವಾಗಿ ಪರಿಶೀಲಿಸಿದಾಗ ಅಲ್ಲೊಂದು ಇಲ್ಲೊಂದು ಸ್ವಲ್ಪ ವ್ಯತ್ಯಾಸಗಳು ಕಾಣಬಹುದು.

ಇಪ್ಪತ್ತೇಳು ಜನ ಸಾಲಿನ ಮನುಷ್ಯರ ಚಿತ್ರವು, ಹನ್ನೆರಡು ಜನ ಸಾಲಿನ ಚಿತ್ರವು ಶೈಲಿಯಲ್ಲಿ ಭಿನ್ನವಾಗಿವೆ. ಮೊದಲನೆಯದರಲ್ಲಿ ಚಿತ್ರಗಳು ಹೆಚ್ಚು ದೃಢಕಾಯದವರಂತೆ ಇವೆ. ವಿಶಾಲ ಭುಜ, ಅಗಲ ಎದೆ, ಪುಷ್ಟವಾದ ತೊಡೆ ಕಾಲುಗಳು ಎತ್ತರ ಸುಮಾರು 27ಸೆಂ.ಮೀ. ಹುಡುಗನ ಎತ್ತರ ಸುಮಾರು 14 ಸೆಂ.ಮೀ. ಹೆಚ್ಚು ಕಡಿಮೆ ನೇರವಾದ ಸಾಲು (1.52 ಮೀ. ಉದ್ದ) ಬಣ್ಣವೂ ಕೂಡ ಕಪ್ಪು ನೇರಳೆ, ಎರಡನೆಯದರಲ್ಲಿ ವ್ಯಕ್ತಿಗಳು ಎತ್ತರ,ನೀಳ ಮುಂಡದ ಭಾಗ ತೆಳ್ಳಗೆ, ಕಾಲುಗಳು ಕಡ್ಡಿಯ ಹಾಗೆ, ತೊಡೆಯ ಭಾಗ ಮಾತ್ರ ಸ್ಥೂಲ. ಸಾಲು ಸ್ವಲ್ಪ ವೃತ್ತವಾಗಿದ್ದು ಜನರು ವರ್ತುಲಾಕಾರದಲ್ಲಿ ನಿಂತಿದ್ದಾರೆ ಎಂಬುದನ್ನು ಸುಲಭವಾಗಿ ಚಾಣಾಕ್ಷತನದದಿಂದ ತೋರಿಸಲಾಗಿದೆ.

ಕೆಂಪೋತ್ತಿದ ಬಣ್ಣ ಸಾಲಿನ ಜಿಂಕೆಗಳ ದೇಹ ಉದ್ದ ಹಾಗು ತೆಳ್ಳಗೆ ಕಾಲುಗಳು ಕಡ್ಡಿಯಂತೆ ಕೋಡುಗಳು ಕವಲೊಡೆದ ರೆಂಬೆಯಂತಿವೆ. ಬಾಲ ಸಣ್ಣದಿದ್ದು ಮೇಲಕ್ಕೆತ್ತಿದೆ. ಕುತ್ತಿಗೆ ನೀಳ, ಸಣ್ಣ ಹಾಗು ನೆಟ್ಟಗಿದ್ದು ತಲೆಯೆತ್ತಿ ನೋಡುತ್ತಿರುವ ಹಾಗಿದೆ. ಎತ್ತುಗಳ ಕೋಡುಗಳು ಉದ್ದವಾಗಿದ್ದು

ಒಂದೇ ರೀತಿಯಲ್ಲಿ ಮೇಲೆ ಬಾಗಿವೆ. ನಿಸರ್ಗದಲ್ಲಿ ಬೆಳೆದ ಒಳ್ಳೆ ಬಲಶಾಲಿ ತಳಿ ಎಂಬಂತೆ ಇವೆ ರೇಖಾ ವಿನ್ಯಾಸ. ಜಿಂಕೆಗಳು ಸಾಮಾನ್ಯವಾಗಿ ಗುಂಪು ಗುಂಪಾಗಿ ಓಡಾಡುತ್ತಿರುತ್ತವೆ.

ಹಂಪಿಯಲ್ಲಿ ಆರು ಸ್ಥಳಗಳಲ್ಲಿ ಶೋಧವಾದ ವರ್ಣಚಿತ್ರ ಗವಿಗಳಲ್ಲಿ ಸ್ಥಳೀಯವಾಗಿ ಕರೆಯಲ್ಪಟ್ಟ 'ಬರಮ ದೇವ'ರ ಗುಂಡಿನ ಚಿತ್ರಗಳು ಅತ್ಯಂತ ವಿಸ್ಮಯಕಾರಿಯೂ, ರೋಚಕವೂ, ಅರ್ಥಪೂರ್ಣವೂ ಆಗಿವೆ. ಇವುಗಳು ಬರೆಯಲ್ಪಟ್ಟ ಕಲ್ಲಾಸರೆಯು ಸ್ವಲ್ಪವೆ ಹಿಂಜರಿದ ಅರ್ಧ ಗೋಲಾಕೃತಿಯ ಚಿತ್ರಪಟದಂತಿದೆ. ಇದರ ಮೇಲೆ ಒಂದು ಕಡೆಯಿಂದ ಮತ್ತೊಂದು ಕಡೆಯವರಿಗೆ ಕುಣಿತದಲ್ಲಿ ತೊಡಗಿದ ನಾಲ್ಕು ಸ್ವಲ್ಪ ದೊಡ್ಡ ದೊಡ್ಡ ಮನುಷ್ಯಾಕೃತಿಗಳಿವೆ. ವ್ಯಕ್ತಿಗಳು ಈ ಗೋಲಾಕೃತಿಯ ರಂಗಮಂಟಪದಲ್ಲಿದ್ದಂತೆ ಕಾಣುತ್ತವೆ. ತನ್ನ ಚಿತ್ರಗಳಿಗೆ ಸೂಕ್ತ ಆಸರೆಯನ್ನು ಆರಿಸುವುದರಲ್ಲಿ ಆ ಕಲಾವಿದನ ಪ್ರತಿಭೆಗೆ ಇದು ಒಂದು ಉತ್ತಮ ನಿದರ್ಶನ. ಎಡಗಡೆಯಿಂದ ಮೊದಲನೆ ಮೂರು ಬಲಬದಿ ನೋಟದಲ್ಲಿವೆ. ಕೊನೆಯದು ಮಂಬದಿ ನೋಟದಲ್ಲಿದೆ ಮೊದಲನೇ ಎರಡು ಚಿತ್ರಗಳಲ್ಲಿ ಸ್ಪಷ್ಟವಾಗಿ ಉಬ್ಬಿದ ಸ್ತನವೂ ಕಾಣಿಸುವುದರಿಂದ ಅವು ಸ್ತ್ರೀ ಆಕೃತಿಗಳು. ಮೂರನೆಯದು ಪುರುಷ, ಸಣ್ಣಾಕೃತಿ ಬಹುಶಃ ಹುಡುಗನಿರಬೇಕು. ತಲೆಯ ಭಾಗವು ಅಳಿಸಿ ಹೋಗಿರಬಹುದು. ಈ ಮೂರು ಸ್ವಲ್ಪ ಕುಗ್ಗಿ ನಿಂತ ಭಂಗಿಯಲ್ಲಿವೆ. ಮುಂಡದ ಭಾಗವು ಸ್ವಲ್ಪ ಮುಂದೆ ಬಾಗಿದೆ. ಕೈಗಳನ್ನು ನೆಟ್ಟಗೆ ಮುಂಚಾಚಿದೆ. ಬೆರಳುಗಳನ್ನು ಬಿಡಿಸಲಾಗಿದೆ. ಮುಖವನ್ನು ಬಲಕ್ಕೆ ಅಂದರೆ ಮುಂಬದಿಗೆ ತಿರುಗಿಸಿದೆ. ಮೊದಲನೆಯದಕ್ಕೆ ಬಾಲವಿದ್ದಂತಿದ್ದು, ಮೇಲಕ್ಕೆತ್ತಲ್ಪಟ್ಟಿದೆ. ತಲೆಯಿಂದ ಹಿಡಿದು ಕಾಲಿನವರೆಗೂ ಇಡೀ ಮೈಯೆಲ್ಲ ರೇಖಾ ಚಿತ್ರೆಗಳಿಂದ ತುಂಬಿಹೋಗಿದೆ. ಮುಖದ ಮೇಲ ಗುಣಾಕಾರ ಆಕೃತಿಯಿದ್ದು, ಪ್ರತಿಯೊಂದು ಕವಲಿನಲ್ಲಿಯೂ ಒಂದೊಂದು ಅರ್ಧ ಕಂಸವಿದೆ. ಕೈಗಳ ಮೇಲೆ ಉದ್ದಕ್ಕೂ ನೀಳ ರೇಖೆಗಳಿವೆ. ಮುಂಡದ ಭಾಗದ ಮೇಲೆ ದ್ವಿರೇಖೆಯ ಗುಣಾಕಾರ ಆಕೃತಿಯಿದ್ದು, ರೇಖೆಗಳ ಮಧ್ಯದಲ್ಲಿ ಅಡ್ಡ ರೇಖೆಗಳಿವೆ. ಈ ರೀತಿಯ ಚಿತ್ರಿತ ದೇಹವುಳ್ಳ ಮನುಷ್ಯಾಕೃತಿಗಳು ಮಲ್ಲಾಪುರ ಮತ್ತು ಹಿರೆಬೆನಕಲ್ಲಿನ 3ನೇ ಗವಿಯಲ್ಲಿ ಇವೆ. ನಾಲ್ಕನೆಯ ವ್ಯಕ್ತಿಯ ಎರಡೂ ಕೈಗಳು ಆಕಡೆ ಈ ಕಡೆ ಮುಂಚಾಚಿವೆ. ಇದರ ತಲೆಯ ಭಾಗ ಅಷ್ಟಾಗಿ ಸ್ಪಷ್ಟವಾಗಿಲ್ಲ. ಎದೆಯ ಭಾಗ ತೀರ ಸಣ್ಣಗಿದ್ದು, ಹೊಟ್ಟೆಯ ಭಾಗ ಅತಿರೇಕವಾಗಿ ಉಬ್ಬಿದೆ. ಕಾಲುಗಳು ಅಗಲಿಸಿದ್ದು ಕೈಗಳಂತೆ ತೆಳ್ಳಗಿವೆ. ಇದು ಗರ್ಭಿಣಿ ಸ್ತ್ರೀ ಚಿತ್ರವಾಗಿರಬಹುದು.

ಈ ರೀತಿಯ ಸ್ತ್ರೀಯರ ನಗ್ನ(?) ಗುಪ್ತ ಕುಣಿತ ಮಲ್ಲಾಪುರದಲ್ಲಿಯೂ ಇದೆ. ಹಿರೆಬೆನಕಲ್ಲಿನ 3ನೇ ಗವಿ, ಮಲ್ಲಾಪುರ ಮತ್ತು ಹಂಪಿಯ ಈ ಚಿತ್ರಗಳು ಸು. 10 ಕಿಮೀ. ಅಂತರದಲ್ಲಿವೆ. ಹಿರೆಬೆನಕಲ್ಲಿನ ಸಮೂಹ ಕುಣಿತದ ರೀತಿಯೇ ಬೇರೆ, ಮೇಲಿನ ಸ್ತ್ರೀ ಸಮೂಹದ ಕುಣಿತವೇ

ಬೇರೆಯಾಗಿದ್ದು ತುಂಬಾ ವಿಶಿಷ್ಟವಾಗಿದೆ. ಕುಣಿತದ ರೀತಿ ಮತ್ತು ಮೈಮೇಲಿನ ಚಿತ್ರಗಳು ಮುಂದಿನ ಶೋಧನೆಗಳಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಬಹುದು.

ಪೂರ್ವ ಪಶ್ಚಿಮವಾಗಿ ಗಂಗಾವತಿಯಿಂದ ಬಿಳಿಭಾವಿ ಮತ್ತು ಉತ್ತರ–ದಕ್ಷಿಣವಾಗಿ ಇಂದುರ್ಗಿ–ಮುದಗಲ್‌ನಿಂದ ಬಳ್ಳಾರಿ–ಹೊಸಪೇಟೆ ಅಂದರೆ ಕ್ರಮವಾಗಿ 50 ಕಿ.ಮೀ. ಮತ್ತು 40 ಕಿ.ಮೀ. ಪ್ರದೇಶದಲ್ಲೆಲ್ಲಾ ಸಾಲುಸಾಲಾಗಿ ಬಂಡೆಗಳ ಗುಡ್ಡಗಾಡುಗಳಿದ್ದು ಹಿಂದೆ ಇಲ್ಲೆಲ್ಲ ಹುಲಿ, ಚಿರತೆ, ಕರಡಿ, ತೋಳ, ಮುಳ್ಳುಹಂದಿ, ಕಾಡೆಮ್ಮೆ, ಗೂಳಿ, ಜಿಂಕೆ ಹಾಗೂ ನವಿಲು ಮೊದಲಾದ ಪ್ರಾಣಿ ಪಕ್ಷಿಗಳಿದ್ದವು. ಈಗಲೂ ಚಿರತೆ, ತೋಳ, ಮುಳ್ಳುಹಂದಿ ಮುಂತಾದವುಗಳು ಅಲ್ಪ ಪ್ರಮಾಣದಲ್ಲಿವೆ. ಗಂಗಾವತಿಗೆ ಸುಮಾರು 6 ಕಿ.ಮೀ. ಪಶ್ಚಿಮಕ್ಕೆ ದೂರದಲ್ಲಿರುವ ಹಿರೆಬೆನಕಲ್ಲ ಗುಡ್ಡದಲ್ಲಿ ಮೇಲೆ ಹೇಳಿದಂತೆ ಬೃಹತ್ ಶಿಲಾಸಂಸ್ಕೃತಿಯ ಜನರ ವಾಸ್ತವ್ಯದ ನೆಲೆ ಮತ್ತು ಅವರು ನಿರ್ಮಿಸಿದ ನೂರಾರು ಕಲ್ಗೋರಿಗಳಿವೆ. ಈ ಪ್ರದೇಶದಲ್ಲೆಲ್ಲಾ ನೂತನ–ಶಿಲಾ ಯುಗ (ಸುಮಾರು ಕ್ರಿ.ಪೂ. 1700–800) ಹಾಗೂ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯ ಜನರು ಇಲ್ಲಿ ನೆಲೆಸಿದ್ದರೆಂದು ಮಸ್ಕಿ, ಪಿಕ್ಕಿಹಾಳ, ಸಂಗನಕಲ್‌ಗಳಲ್ಲಿಯ ಪ್ರಾಚೀನ ನಿವೇಶನಗಳಲ್ಲಿ ನಡೆಸಿದ ಪುರಾತತ್ವ ಉತ್ಖನನಗಳಿಂದ ತಿಳಿದಿದೆ. ಮತ್ತು ಎರಡನೇ ಹಂತದ ಜನರು ಹೆಚ್ಚಾಗಿ ಕುದುರೆಸವಾರರು ಆಗಿದ್ದರು. ಮೇಲ ವಿವರಿಸಿದ ಚಿತ್ರಗಳಲ್ಲಿ ಆಯುಧಪಾಣಿಗಳಾದ ಕುದುರೆ ಸವಾರರ ಚಿತ್ರಗಳು ಇವೆ. ಒಟ್ಟಿನಲ್ಲಿ ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಿಸರಕ್ಕೆ ಹೊಂದಿದ ಹಾಗೆ ಮನುಷ್ಯರ, ಪ್ರಾಣಿಗಳ ವಿಶಿಷ್ಟ ಲಕ್ಷಣಗಳನ್ನು ಮತ್ತು ಚಲನವಲನಗಳನ್ನು ಸೂಕ್ಷ್ಮವಾಗಿ ನೋಡಿ ಗ್ರಹಿಸಿ, ಕೇವಲ ಛಾಯಾ ಕೃತಿಯ ಶೈಲಿಯಾಗಿದ್ದರೂ ರೇಖಾ ವಿನ್ಯಾಸದಲ್ಲಿ ಸ್ಪಷ್ಟವಾಗಿ, ಶಕ್ತಿಶಾಲಿಯಾಗಿ ನೋಡುವವನ ಮನಸ್ಸಿಗೆ ಆಯಾ ಪ್ರಾಣಿಗಳ ಸರಿಯಾದ ಕಲ್ಪನೆ ಬರುವ ಹಾಗೆ ಮಾಡಿರುವದು ಮೆಚ್ಚತಕ್ಕದ್ದು. ಬಹುಶಃ ಈ ಚಿತ್ರಗಳನ್ನು ಇವೆರಡು ಸಂಸ್ಕೃತಿಗಳು ಒಂದರಲ್ಲೊಂದು ವ್ಯಾಪಿಸಿಕೊಂಡ ಮತ್ತು ಸ್ವಲ್ಪ ಅನಂತರ ಕಾಲದವರೆಗಿನ ಸಮಯದಲ್ಲಿ ಬಿಡಿಸಿರಬೇಕೆಂದು ತರ್ಕಿಸಬಹುದು. ಮತ್ತು ಕುದುರೆ ಸವಾರ ಚಿತ್ರದಲ್ಲಿ ಲಗಾಮು ಹಿಡಿದ ರೀತಿಯು ಈ ಚಿತ್ರಗಳ ಪ್ರಾಚೀನತೆಯನ್ನು ಸೂಚಿಸುತ್ತದೆ. ☐

# 4. ಗವಿವರ್ಣಚಿತ್ರಗಳು (ಇತಿಹಾಸ ಕಾಲ)

## 1. ಬಾದಾಮಿ

ಇತಿಹಾಸ ಕಾಲದ ವರ್ಣಚಿತ್ರ ಗವಿಗಳಲ್ಲಿ ಬಾದಾಮಿಯದು ಬಹು ವಿಶೇಷವಾದದ್ದು. ಎಲ್ಲ ಕಾಲದ ಗವಿ ವರ್ಣಚಿತ್ರಗಳಲ್ಲೆಲ್ಲ ಶೈಲಿ ಮತ್ತು ವಿಷಯದಲ್ಲಿ ಇದು ತೀರ ಭಿನ್ನವಾದುದಲ್ಲದೆ ಈ ತರಹದ ಸಂಪ್ರದಾಯಕ್ಕೆ ಎರಡೇ ಉದಾಹರಣೆಗಳೆಂದರೆ, ಇದೊಂದು, ಮತ್ತು ಮಾಸ್ಕಿ ಗುಡ್ಡದಲ್ಲಿರುವಂಥದ್ದು. ಇವು ಬಾದಾಮಿಯದು ಮಂಗಳೇಶನು ನಿರ್ಮಿಸಿದ ವಿಷ್ಣುಲಯಣ(ಗುಹಾ ದೇವಾಲಯ) ದಲ್ಲಿರುವ ಪ್ರಬುದ್ಧ ಪೂರ್ಣ ವರ್ಣಚಿತ್ರಕಲೆ ಸಂಪ್ರದಾಯದ ವರ್ಣಚಿತ್ರಗಳನ್ನು ಹೋಲುತ್ತವೆ.

ಮೊದಲನೇ ಪುಲಿಕೇಶಿಯ ಕೋಟೆ, "ಮೇಲಣ'' ಮತ್ತು "ಕೆಳಗಿನ'' ಶಿವಾಲಯಗಳನ್ನುಳ್ಳ ಎತ್ತರದ ಗುಡ್ಡದ ಉತ್ತರಕ್ಕೆ ಒಂದು ಬೆಟ್ಟದ ಸಾಲಿದೆ. ಈ ಸಾಲಿನಲ್ಲಿ ಅಲ್ಲಲ್ಲಿ ಒಟ್ಟು 6 ಗವಿ ಚಿತ್ರಗಳಿವೆ. ಅವುಗಳಲ್ಲಿ ಒಂದು ಕಲ್ಲಾಸರೆಯ ಹಿಂಬದಿಯ ನೆಟ್ಟಗಿನ ಕಲ್ಲುಬಂಡೆಯ ಮೇಲೆ ಸ್ವಲ್ಪ ಹಳದಿ ಬಣ್ಣದ ಸುಣ್ಣದ ಲೇಪನ ಮಾಡಿದೆ. ಇದರ ಮೇಲೆ ಕೆಂಪು ಬಣ್ಣದ ರೇಖೆಗಳಲ್ಲಿ ಪ್ರಮಾಣಬದ್ಧವಾಗಿ ಎಲ್ಲ ದೈಹಿಕ ಲಕ್ಷಣಗಳನ್ನು ಕಾಣುವ ಹಾಗೆ ಗಣ್ಯ ವ್ಯಕ್ತಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ರೇಖೆಗಳೊಳಗಿನ ಭಾಗವು ಹಿನ್ನೆಲೆಯ ಹಳದಿ–ಬಿಳಿ ಮಿಶ್ರ ಬಣ್ಣದಿಂದ ತುಂಬಿರುವುದರಿಂದ ವ್ಯಕ್ತಿಗಳ ಮೈ ಮಾಟ ಸ್ಫುಟವಾಗಿ ಕಾಣುತ್ತದೆ. ಒಬ್ಬಳು ಗಣ್ಯ ಸ್ತ್ರೀ ಕುಳಿತಿದ್ದಾಳೆ. ಅವಳ ಬಲಬದಿಗೆ ಇಬ್ಬರು ನಿಂತಿದ್ದಾರೆ. ಮತ್ತು ಈ ಗಣ್ಯ ವ್ಯಕ್ತಿಯ ಕಡೆಗೆ ಮೂವರು ಸ್ತ್ರೀಯರು ಕಮಲ ಪುಷ್ಪವನ್ನು ಹಿಡಿದು ಬರುತ್ತಿರುವ ಹಾಗಿದೆ. ಎಲ್ಲರೂ ಮಿತವಾಗಿ ಆಭರಣಗಳನ್ನು ತೊಟ್ಟಿದ್ದಾರೆ. ಪ್ರಾಯಶಃ ಉಳಿದವರು ಕುಳಿತ ಗಣ್ಯ ಸ್ತ್ರೀಯ ಸಖಿಯರಿರಬಹುದು. ಇದು ಚಿತ್ರದ ವಿಷಯವಾಗಿದ್ದು, ಸುಮಾರು 2.20 x 1.00 ಮೀ. ಕ್ಷೇತ್ರದಲ್ಲಿ ಬಿಡಿಸಲಾಗಿದೆ. ನೈಸರ್ಗಿಕವಾಗಿ ಬಣ್ಣ ಬಣ್ಣ ಪಟ್ಟೆಯುಳ್ಳ ಮರಳು ಕಲ್ಲಿನ ಹಿನ್ನೆಲೆ, ನಿಂತ ವ್ಯಕ್ತಿಗಳ ಮೊಳಕಾಲಿನ ಕೆಳಭಾಗ ಸಹಜವಾಗಿ ಕಪ್ಪು ಬಣ್ಣದ್ದಾದ್ದರಿಂದ ವ್ಯಕ್ತಿಗಳು ಆಕಾಶದಲ್ಲಿ ಸಂಚರಿಸುತ್ತಿದ್ದಾರೇನೋ ಎಂಬ ಭ್ರಮೆ ಉಂಟಾಗುತ್ತದೆ. ವ್ಯಕ್ತಿಗಳ ಮೈ ಮಾಟ, ಪ್ರಮಾಣಬದ್ಧತೆ, ಅಂಗಾಂಗಗಳನ್ನು ಬಿಡಿಸಿದ ಶೈಲಿ, ಸರಳ ಆಭರಣಗಳ ಅಲಂಕಾರ ಇವೆಲ್ಲವೂ ಬಾದಾಮಿ ಊರೊಳಗಿನ ಮೂರನೇ

ವಿಷ್ಣುಲಯಣದಲ್ಲಿರುವ ವರ್ಣಚಿತ್ರಗಳಿಗೆ ಸಮೀಪವಾಗಿದ್ದು, ಈ ಚಿತ್ರ ಒಬ್ಬ ನುರಿತ ಶಿಷ್ಟ ಚಿತ್ರಕಾರನಿಂದ ಬಿಡಿಸಿದ್ದೆಂದು ಸೂಚಿಸುವವು. ಈ ಚಿತ್ರಪಟ್ಟಿಕೆ ನಿಸ್ಸಂಶಯವಾಗಿ ಬಾದಾಮಿ ಚಾಲುಕ್ಯ ಕಾಲದ್ದು. ವಿಷ್ಣುಲಯಣದಲ್ಲಿರುವ ವರ್ಣಚಿತ್ರಗಳನ್ನು ಬಿಟ್ಟು ಈ ಕಾಲದ ಇಂಥ ಕಲಾ ಸಂಪ್ರದಾಯಕ್ಕೆ ಸಂಬಂಧಪಟ್ಟ ಚಿತ್ರಗಳು ಮತ್ತೆಲ್ಲಿಯೂ ಗೋಚರವಾಗಿಲ್ಲ. ಆದ್ದರಿಂದ ಈ ಬಂಡೆ ಚಿತ್ರವು ಮಹತ್ವದ್ದು.

## 2. ಬೈಲ್ ಮರ್ಚೇಡಿನ ಚಿತ್ರ

ಬೈಲ್ ಮರ್ಚೇಡ ಮಾನ್ವಿ ತಾಲೂಕಿನ ಒಂದು ಸಣ್ಣ ಹಳ್ಳಿ. ಒಂದು ದೊಡ್ಡ ಕಲ್ಲುಗುಡ್ಡದ ಬದಿಯಲ್ಲಿದೆ. ಇದರ ನೈರುತ್ಯಕ್ಕೆ ಗುಡ್ಡದಂಚಿನಲ್ಲಿ ಮುಂಚಾಚಿದ ಒಂದು ದೊಡ್ಡ ಬಂಡೆ. ಇದರ ಒಳಮೈ ಮೇಲೆ ಹಲವಾರು ಕುದುರೆ ಸವಾರರ ಚಿತ್ರಗಳಿವೆ. ಈ ಚಿತ್ರದ ಕಲ್ಲುಗುಂಡಿಗೆ ಸ್ಥಳಿಕವಾಗಿ 'ಕಾಟಮಯ್ಯನ ಗುಂಡು' ಎಂದು ಹೆಸರು. ಇದರ ಅನತಿ ದೂರದಲ್ಲಿ ಉತ್ತರ ಬದಿಗೆ ಕೆಂಪು– ಕಪ್ಪು ದ್ವಿವರ್ಣದ ಮೃತ ಪಾತ್ರೆಯ ಚೂರುಗಳು ಅಲ್ಲಲ್ಲಿ ಬಿದ್ದಿವೆ. ಬಹುಶಃ ಬೃಹತ್ ಶಿಲಾ ಸಂಸ್ಕೃತಿಯ ವಸ್ತು ಅವಶೇಷಗಳೆಂದು ಕಾಣುವದು.

ಈ ಗುಂಪಿನ ಹಿಂಬದಿಗೆ ಬಯಲಿನಲ್ಲಿ ಮಧ್ಯಯುಗೀನ ಕಾಲದ ಒಂದು ಜನ ವಾಸ್ತವ್ಯದ ನೆಲೆಯೂ ಇದೆ. ಇದರಲ್ಲಿ ಮನೆಗಳ ನೆಲಗಟ್ಟಿನ, ಬೂದು ಬಣ್ಣದ ಮೃತ್ ಪಾತ್ರೆಗಳ ಅವಶೇಷಗಳು ಮೊದಲಾದವು ಇವೆ.

ಚಿತ್ರಗಳು ಎರಡು ಗುಂಪುಗಳಲ್ಲಿವೆ. ಮೇಲಿನ ಗುಂಪಿನಲ್ಲಿ ಕುದುರೆ ಸವಾರರ ಮತ್ತು ಗೂಳಿಗಳ ಚಿತ್ರಗಳು. ಕುದುರೆ ಸವಾರನ ಎಡಗೈಯಲ್ಲಿ ಉದ್ದನೆಯ ಈಟಿ. ಕುದುರೆಗೆ ಜೀನು ತೊಡಿಸಲಾಗಿದೆ. ತಲೆಯ ಮೇಲೆ ರಕ್ಷಣಾ ಕವಚವಿದೆ. ಬಾಯಿಗೆ ಹಾಕಿದ ಕಡಿವಾಣದಿಂದ ಲಗಾಮು ಸಹಜವಾಗಿ ಕುತ್ತಿಗೆ ಕೆಳಗಡೆಯಿಂದ ಹಾದು ಸವಾರನ ಬಲಗೈಯಲ್ಲಿದೆ. ಸವಾರನ ತಲೆಗೆ ಪೇಟ(ಪಟಗಾ)ವನ್ನು ಕಟ್ಟಿದ್ದಾನೆ. ಇದೇ ತರಹದ ಜೋಡಿ ಸವಾರರು ಎದುರು ಬದುರಿದ್ದು ತಮ್ಮ ಈಟಿಗಳಿಂದ ಕಾದಾಡುತ್ತಿದ್ದಾರೆ. ಇಂಥ ಕಾದಾಟದ ಚಿತ್ರಗಳು ಮೂರಿವೆ. ಚಿತ್ರಗಳ ಮಧ್ಯದಲ್ಲಿ ಓಡುತ್ತಿರುವ ಇಣಿಯುಳ್ಳ ಎರಡು ದನ/ಗೂಳಿಗಳಿವೆ.

ಎರಡನೇ ಗುಂಪಿನಲ್ಲಿ ಇಬ್ಬರು ಸವಾರರು ಈಟಿ ಮತ್ತು ಕತ್ತಿಯನ್ನು ಹಿಡಿದು ಜೀನು ಕಡಿವಾಣ ಹಾಕಿದ ಕುದುರೆಯ ಮೇಲೆ ಹೋಗುತ್ತಿರುವುದು. ಇವಲ್ಲದೆ ಬಾಲ ಎತ್ತಿಕೊಂಡ ಗುಂಪು ಗುಂಪಾಗಿ (ಎರಡೆರಡು, ಮೂರು, ನಾಲ್ಕು, ಐದು) ದನ/ಗೂಳಿಗಳು ಕುದುರೆ ಸವಾರರ ಮಧ್ಯೆ ಮುಂದೆ ಓಡುತ್ತಿರುವುದು. ಬಹುಶಃ ಆಗಿನ ಕಾಲದಲ್ಲಿ ಆಗಾಗ್ಗೆ ನಡೆಯುತ್ತಿದ್ದ

'ಗೋ ಗ್ರಹಣ'ದ ವಿಷಯ ನಿರೂಪಣೆ ಇರಬಹುದು. ಬಹಳ ಸಹಜವಾಗಿದೆ ನಿರೂಪಣ ಶೈಲಿ. ವೀರಗಲ್ಲು ಶಿಲ್ಪಫಲಕಗಳಲ್ಲಿ ಸುಮಾರು 9ನೇ ಶತಮಾನದಿಂದ ಈ ವಿಷಯ ಸರ್ವೇ ಸಾಮಾನ್ಯ ವರ್ಣಚಿತ್ರದಲ್ಲಿ ಈ ವಿಷಯ ತೋರಿಸಿರುವ ಉದಾಹರಣೆ ಇದೊಂದೇ. ಇವೆರಡು ಗುಂಪು ಚಿತ್ರಗಳ ಮತ್ತೊಂದು ಬದಿಯಲ್ಲಿ ಸ್ವಲ್ಪ ಆಚೆನ ಮತ್ತೊಂದು ಬಂಡೆಯ ಮೇಲೆ ಅಂಗೈಯ ಚಟ್ಟುಗಳಿವೆ.

ಚಿತ್ರಗಳೆಲ್ಲವೂ ಕಂದು ಕೆಂಪು ಕೆಮ್ಮಣ್ಣಿನ ಬಣ್ಣದಲ್ಲಿವೆ. ಮೊದಲು ಸ್ವಲ್ಪ ಹಳದಿ ಮಿಶ್ರಿತ ಸುಣ್ಣವನ್ನು ಬಂಡೆಯ ಮೇಲ್ಮೈಯ ಮೇಲೆ ಬಳಿದು ಅದರ ಮೇಲೆ ಈ ಚಿತ್ರಗಳನ್ನು ತೆಗೆಯಲಾಗಿದೆ. ಚಿತ್ರಗಳೆಲ್ಲವು ಛಾಯಾಕೃತಿಗಳು.

ಕುದುರೆ ಸವಾರರ ಅದರಲ್ಲೂ ಕಾದಾಟದ ಚಿತ್ರಗಳು ಸಮಕಾಲೀನ ಅಂದರೆ 14–16ನೇ ಶತಮಾನದ ವಿಜಯನಗರ ಶೈಲಿಯ ಸಾಲು ಪಟ್ಟಿಕೆಗಳಲ್ಲಿಯ ಈ ತರಹದ ಶಿಲ್ಪಗಳಿಗೆ ಹೋಲುತ್ತವೆ. ಶೈಲಿ ಹಾಗೂ ಪಕ್ಕದಲ್ಲಿಯ ಮಧ್ಯಯುಗೀನ ಜನ ವಾಸ್ತವ್ಯದ ನೆಲೆಯನ್ನು ಗಮನಿಸಿದಾಗ ಈ ಚಿತ್ರಗಳು ಸ್ವಲ್ಪ ಹೆಚ್ಚು ಕಡಿಮೆ ಅದೇ ಕಾಲದ್ದೆಂದೇ ಹೇಳಬಹುದು.

ಈ ಚಿತ್ರಗಳನ್ನು ತೆಗೆದ ಸ್ವಲ್ಪ ಕಾಲದ ಮೇಲೆ ದಪ್ಪನೆಯ ಕವಲೊಡೆದ ರೆಂಬೆಯ ಚಿತ್ರವನ್ನು ಮೂಡಿಸಲಾಗಿದೆ. ಇದು ಸುಮಾರು 200 ವರ್ಷಗಳಿಂದೀಚೆನದಿರಬಹುದು. ಈ ರೆಂಬೆಯ ಚಿತ್ರದ ಮೇಲೆ ಸುಣ್ಣದಲ್ಲಿ ಹನುಮಂತನ ಚಿತ್ರ ಬರೆಯಲಾಗಿದೆ. ಇದು ತೀರ ಇತ್ತೀಚೆನದು.

## 3. ಬಲಚಕ್ರ

ಬಲಚಕ್ರ(ಯಾದಗಿರಿ ತಾಲ್ಲೂಕು ಗುಲ್ಬರ್ಗಾ ಜಿಲ್ಲೆ)ದಲ್ಲಿ ಒಂದು ಎತ್ತರದ ಗುಡ್ಡದ ಮೇಲಿನ ಒಂದು ವಿಸ್ತಾರವಾದ ಕಲ್ಲಾಸರೆಯಲ್ಲಿ ಚಿತ್ರ ವಿಚಿತ್ರ ವರ್ಣ ಚಿತ್ರಗಳಿವೆ. ಸುಮಾರು 6 X 2 ಮೀ.ಗಿಂತಲೂ ಸ್ವಲ್ಪ ಹೆಚ್ಚು ವಿಶಾಲವಾದ ಪಟದಂತಿರುವ ಬಂಡೆಯ ಮೇಲೆ ಇದರ ಉದ್ದಗಲಕ್ಕೂ (ಮೇಲಿನ ಸ್ವಲ್ಪ ಭಾಗ ಬಿಟ್ಟು) ಒತ್ತೊತ್ತಾಗಿ ಪ್ರಾಣಿ, ಮನುಷ್ಯ, ರೇಖಾಕೃತಿ ಚಿತ್ರಗಳಿಂದ ತುಂಬಿಹೋಗಿದೆ. ಇವುಗಳ ಸಾಂದ್ರತೆ ವಿಸ್ತಾರವು ಸಾಂಚೆಯಲ್ಲಿ ಬೌದ್ಧ ಸ್ತೂಪದ ತೋರಣಗಳಲ್ಲಿಯ ಚಿತ್ರಪಟ್ಟಿಕೆಗಳನ್ನು ನೆನಪಿಗೆ ತರುತ್ತದೆ. ಮೇಲ್ಭಾಗದಲ್ಲಿ ಕಂದು ಬಣ್ಣದಲ್ಲಿ ಬರೆದ ಸು. 7ನೇ ಶತಮಾನದ ಐದು ಅಕ್ಷರಗಳ ಒಂದು ಸಾಲಿನ ಶಾಸನವಿದೆ. ಇದು ಒಬ್ಬ ವ್ಯಕ್ತಿಯ ಹೆಸರು: "ಶ್ರೀ ಉಗ್ರಮಿಟ್ಟ" (?), ಪ್ರಾಯಶಃ ಬಾದಾಮಿ ಚಾಲುಕ್ಯರ ಆ ಭಾಗದ ಅಧಿಕಾರಿಯೇನೊ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಮನುಷ್ಯ, ಮನುಷ್ಯಹಸ್ತ, ಪ್ರಾಣಿ, ಕಮಲದ ಹೂ, ವಿವಿಧ ರೇಖಾಕೃತಿ ಮತ್ತು ಕೆಲವು ಅಸ್ಪಷ್ಟ ಚಿತ್ರಗಳಿವೆ. ಇವುಗಳ ಮಾದರಿ ಮತ್ತು ಶೈಲಿಗಳ ಆಧಾರದ ಮೇಲೆ ಇವುಗಳು ಕನಿಷ್ಠ ಮೂರು ಬೇರೆ ಬೇರೆ ಕಾಲಘಟ್ಟಗಳಿಗೆ ಸೇರಿದವೆಂದು ತೋರುತ್ತದೆ. ಎಲ್ಲವೂ ಪೂರ್ಣವಾಗಿ ಸಾಂಕೇತಿಕ. ಸುಮಾರು ಹನ್ನೆರಡು ಮನುಷ್ಯ ಚಿತ್ರಗಳಿದ್ದು, ಅವುಗಳು ಮೂರು ಕಾಲಘಟ್ಟಗಳಿಗೆ ಸೇರಿದವು. ಆಯತಾಕಾರದ ಮುಂಡ, ಚೌಕೋನ ಕುತ್ತಿಗೆ, ತಲೆ ವಿಷಮ ಚೌಕೋನ ಅಥವಾ ಅರ್ಧಗೋಲಾಕೃತಿ, ಕೈಗಳಾಗಲಿ ಕಾಲುಗಳಾಗಲಿ ಮಾತ್ರ ತಕ್ಕಮಟ್ಟಿನ ಮೈಕಟ್ಟಿನಿಂದ ನೈಜವಾಗಿರುತ್ತವೆ. ಮುಂಡದ ಮೇಲೆ ರೇಖಾ ಚಿತ್ರಗಳು ಅಥವಾ ನಾಲ್ಕು ಐದು ಊರ್ಧ್ವ ಸಮಾನಾಂತರ ತೆಳ್ಳಗಿನ ರೇಖೆಗಳು. ಒಂಭತ್ತು ಚಿತ್ರಗಳಲ್ಲಿ ಕೈಗಳು ಮಾತ್ರ ಅಥವಾ ತೋಳುಗಳು ಸೇರಿದಂತೆ ಪೂರ್ಣ ಮೇಲಕ್ಕೆತ್ತಿರುತ್ತವೆ. ಒಂದರಲ್ಲಿ ಮಾತ್ರ ಕೈಗಳು ಕೆಳಮುಖವಾಗಿವೆ. ಕಾಲುಗಳನ್ನು ಸ್ವಲ್ಪ ಡೊಂಕು ಮಾಡಿಕೊಂಡು ಅಥವಾ ನೆಟ್ಟಗೆ ನಿಂತ ಭಂಗಿ. ಇವಿಷ್ಟು ಸಾಮಾನ್ಯ ಲಕ್ಷಣಗಳು. ಮನುಷ್ಯ ಚಿತ್ರಗಳಲ್ಲಿ ಐದು ಪ್ರಕಾರಗಳಿವೆ.

ಮೊದಲನೆಯ ಪ್ರಕಾರದ ಚಿತ್ರಗಳಲ್ಲಿ ರೇಖೆಗಳು ದಪ್ಪವಾಗಿವೆ. ಎರಡರಲ್ಲಿ ಪಾದ, ಕಾಲು ಮತ್ತು ತೊಡೆಗಳು ಗಟ್ಟಿಮುಟ್ಟಾಗಿ ದೃಢವಾಗಿವೆ. ಒಂದರ ಹೊಟ್ಟೆ– ಎದೆ ಮಧ್ಯಭಾಗದ ಮೇಲೆ ವಜ್ರಾಕೃತಿಯ ಪಟ್ಟಿಕೆ ಸೊಂಟದಿಂದ ಕುತ್ತಿಗೆತನಕ ಇದೆ. ಇದರಲ್ಲಿ ಮರ್ಮಾಂಗವನ್ನು ತೋರಿಸಿದೆ. ಇದು ಒಂದು ಪುರುಷಾಕೃತಿ. ಮತ್ತೊಂದರಲ್ಲಿ ಹೊಟ್ಟೆಯ ಮೇಲೆ ವಜ್ರಾಕೃತಿಯ ಊರ್ಧ್ವ ಪಟ್ಟಿಕೆಯಿದ್ದು, ಎದೆಯ ಮಧ್ಯದಲ್ಲಿ ಎರಡು ಸಮಾನಾಂತರ ರೇಖೆಗಳು, ನಡುವೆ ನಾಲ್ಕು ಅಡ್ಡರೇಖೆಯುಳ್ಳ ಪಟ್ಟಿಕೆಯು, ಕುತ್ತಿಗೆ ಬಳಿ ಆರು ಭಾಗಗಳುಳ್ಳ ಅಡ್ಡ ಪಟ್ಟಿಕೆಯು, ಪಕ್ಕೆಗಳ ಭಾಗಗಳಲ್ಲಿ ತ್ರಿಕೋಣಾಕೃತಿಯ ಅಂಚು ಇವೆ. ತಲೆಯ ಭಾಗದಲ್ಲಿ ಊರ್ಧ್ವ ರೇಖೆಗಳಿವೆ. ಮತ್ತೊಂದು ಮನುಷ್ಯಾಕೃತಿಯ ಸಣ್ಣ ಚಿತ್ರವಿದೆ. ನೈಜರೀತಿಯ ಎಡಗಾಲು, ಬಲಗಾಲು ಅಳಿಸಿ ಹೋಗಿದೆ. ಆಯತಾಕಾರ ಮುಂಡದ ಹೊಟ್ಟೆ–ಎದೆ ಮಧ್ಯದಲ್ಲಿ ವಜ್ರಾಕೃತಿಮಾಲಿಕೆ ಚಿತ್ರ. ತಲೆ ಸ್ವಲ್ಪ ದುಂಡಾಗಿದೆ. ಕೈಗಳನ್ನು ಮಾತ್ರ ಮೇಲಕ್ಕೆತ್ತಿವೆ. ಸಣ್ಣ ಪ್ರಮಾಣದ ಈ ಚಿತ್ರದಲ್ಲೂ ಪುರುಷ ಮರ್ಮಾಂಗವನ್ನು ತೋರಿಸಲಾಗಿದೆ. ಇದರಲ್ಲಿ ಒಂದು ಗಮನಾರ್ಹ ಅಂಶವಿದೆ. ಬಾದಾಮಿ ಚಾಲುಕ್ಯ ಕಾಲದ ಒಬ್ಬ ವ್ಯಕ್ತಿಯ ಹೆಸರಿನ ಶ್ರೀ ಅಕ್ಷರದ ರ ಕಾರದ ಸಂಕೇತ ರೇಖೆ ಈ ಚಿತ್ರದ ಮೇಲೆ ಹಾದು ಹೋಗಿದೆ. ಆದ್ದರಿಂದ ಇದು 7ನೇ ಶತಮಾನಕ್ಕಿಂತ ಪೂರ್ವ ಕಾಲದ್ದೆಂದು ತಿಳಿಯಬಹುದು. ಈ ಚಿತ್ರದ ಎಡಬದಿಯಲ್ಲಿ ಈ ಪ್ರಕಾರದ ಇನ್ನೊಂದು ಚಿತ್ರವಿದೆ. ಮೈಮೇಲೆ ಒಂದರ ಮೇಲೊಂದರಂತೆ ಕೋನಾಕೃತಿಗಳ ಸಾಲು ಇದೆ. ಕೈಗಳು ಕೆಳಮುಖವಾಗಿವೆ.

ಎರಡನೇ ಪ್ರಕಾರದಲ್ಲಿ ಗಿಡ್ಡಾಕೃತಿ, ಪಾರ್ಶ್ವನೋಟ ಎರಡು ದಪ್ಪರೇಖೆಗಳೇ ಕಾಲುಗಳು. ಕೈಗಳು ಕಾಣಿಸುವುದೇ ಇಲ್ಲ. ಮೇಲ್ನೋಟಕ್ಕೆ ಗೂಬೆಯಂತೆ ಕಾಣಿಸುವುದು. ಮತ್ತೆರಡರಲ್ಲಿ

ಒಂದು ದೊಡ್ಡದು ಒಂದು ಚಿಕ್ಕದು. ಪಾದಗಳು ಸ್ವಲ್ಪ ನೈಜವಾಗಿವೆ. ಕಾಲುಗಳು ಕಡ್ಡಿಗಳಂತೆ. ರೇಖಾ ಚಿತ್ರಗಳುಳ್ಳ ಮುಂಡವು ಚೌಕೋನ. ಇದೇ ರೀತಿಯ ಇನ್ನೊಂದು ಚಿತ್ರವಿದೆ. ಆದರೆ ಇದಕ್ಕೆ ತಲೆಯ ಭಾಗ ಇಲ್ಲ.

ಮೂರನೆಯ ಪ್ರಕಾರದ ಎರಡೂ ಆಕೃತಿಗಳು ಕುಬ್ಜ ಹಾಗೂ ಉಬ್ಬಿದ ಹೊಟ್ಟೆ ಎರಡೂ ಕೈಗಳನ್ನು ಪೂರ್ಣ ಮೇಲಕ್ಕೆತ್ತಿವೆ. ಹಸ್ತಗಳಲ್ಲಿ ಬೆರಳುಗಳನ್ನು ಬಿಡಿಸಲಾಗಿದೆ. ಮೈಮೇಲೆ ರೇಖಾ ಚಿತ್ರಗಳು. ಶಿಲಾ ಶಿಲ್ಪಗಳಲ್ಲಿಯ ಕುಬ್ಜ ಗಣಗಳಂತಿವೆ.

ನಾಲ್ಕನೆಯ ಪ್ರಕಾರದಲ್ಲಿ ಕೈಕಾಲುಗಳು ಕಡ್ಡಿಯಂತೆ ತೆಳ್ಳನೆ ರೇಖೆಗಳು, ಆಯತಾಕಾರದ ಮುಂಡದ ಪಕ್ಕೆಗಳ ಭಾಗದಲ್ಲಿ ತ್ರಿಕೋನಾಕೃತಿಗಳ ಸಾಲು. ತಲೆ ಚಚ್ಚೌಕ, ಬೆರಳು ಸಹಿತ ಎಡಗೈ ಪೂರ್ಣ ಮೇಲಕ್ಕೆತ್ತಿದೆ. ಪಾದಗಳಿಗೆ ಬೂಟು ಹಾಕಿದಂತಿದೆ. ಎರಡು ಕಾಲುಗಳ ನಡುವೆ ಬೆರಳು ಪಾದ ಸಹಿತ ಬಲಯುತ ಒಂದು ಕಾಲಿನ ಪಾರ್ಶ್ವ ನೋಟದ ಚಿತ್ರ. ಥಕ್ಕನೆ ಇಡೀ ಚಿತ್ರವನ್ನು ನೋಡಿದಲ್ಲಿ ಇದು ಮೂರು ಕಾಲಿನ ಮನುಷ್ಯ ಚಿತ್ರವೆಂದು ತೋರುತ್ತದೆ. ಆದರೆ ಕಾಲು, ಮನುಷ್ಯ ಚಿತ್ರಗಳು ಬೇರೆ ಬೇರೆ. ಮೊದಲೇ ಚಿತ್ರಿಸಿದ್ದ ಕಾಲಿನ ಚಿತ್ರದ ಮೇಲೆ ಮನುಷ್ಯ ಚಿತ್ರವನ್ನು ಬರೆಯಲಾಗಿದೆ.

ಐದನೆಯ ಪ್ರಕಾರದಲ್ಲಿ ಕೇವಲ ಉದ್ದಗಲಗಳ ರೇಖೆಗಳಿಂದ ಪೂರ್ಣವಾಗಿ ಸಾಂಕೇತಿಕವಾದ ಮನುಷ್ಯ ಚಿತ್ರ. ಐದು ಉದ್ದ ರೇಖೆಗಳು ಮಧ್ಯದ ಮೂರು ರೇಖೆಗಳು ಬದಿಯ ರೇಖೆಗಳಿಗಿಂತ ಸ್ವಲ್ಪ ಎತ್ತರವಾಗಿದ್ದು, ಆ ಭಾಗವು ತಲೆಯನ್ನು ಸೂಚಿಸುತ್ತದೆ. ಬದಿಯ ರೇಖೆಗಳ ತುದಿಯ ಮಟ್ಟಕ್ಕೆ ಅಡ್ಡರೇಖೆಯಿದ್ದು, ಅದರ ತುದಿಗಳನ್ನು ಮೇಲ್ಮುಖ ಮಾಡಿದೆ. ಅವು ಕೈಗಳು. ಹಾಗೆಯೇ ಬುಡದ ಭಾಗದಲ್ಲಿ ಮತ್ತೊಂದು ಅಡ್ಡಗೆರೆಯಿದ್ದು, ಅದರ ತುದಿಗಳು ಕೆಳಮುಖವಾಗಿವೆ. ಅವು ಕಾಲುಗಳು. ಇದೊಂದು ಅತ್ಯಂತ ವಿಶಿಷ್ಟ ಮಾದರಿಯ ಮನುಷ್ಯ ಚಿತ್ರ. ಇದರಲ್ಲಿಯೂ ಒಂದು ಗಮನಾರ್ಹ ಅಂಶವಿದೆ. ಇದರ ಬಲಗೈ ಬಾದಾಮಿ ಚಾಲುಕ್ಯ ಕಾಲದ ಹೆಸರಿನ ಒಂದು ಅಕ್ಷರದ ರೇಖೆಯ ಮೇಲೆ ಹೋಗಿದೆ. ಆದ್ದರಿಂದ 7–8ನೇ ಶತಮಾನದ ಅನಂತರ ಕಾಲದ್ದು. ಇನ್ನೊಂದು ನಾಲ್ಕು ಉದ್ದಗೆರೆಗಳ ಚಿತ್ರ. ಇದರಲ್ಲಿ ಮೇಲಕ್ಕೆತ್ತಿದ ತೋಳುಗಳ ಚಿತ್ರಣದಲ್ಲಿ ಮಾತ್ರ ಸ್ವಲ್ಪ ನೈಜತೆಯಿದೆ.

## ಪ್ರಾಣಿ ಚಿತ್ರಗಳು

ಈ ಕಲಾಕೃತಿಯಲ್ಲಿರುವ ಮೂರು ಪ್ರಾಣಿ ಚಿತ್ರಗಳು ಮಾತ್ರ ನೈಜವಾಗಿವೆ. ಒಂದು ಗಬ್ಬದ ಹಸು(?), ಇನ್ನೊಂದು ಕವಲು ಕೋಡಿನ ಜಿಂಕೆ, ಮತ್ತೊಂದು ಪುಷ್ಟವಾದ ಹಂದಿ. ಹಸುವಿನ

ಉಬ್ಬಿದ ಹೊಟ್ಟೆ ಎಲ್ಲದರ ಬೆನ್ನಿನ ಬಾಗು ಕುತ್ತಿಗೆ, ಕಿವಿ, ಮೂತಿ, ಕೋಡುಗಳು, ಕಾಲುಗಳು ಪ್ರಮಾಣಬದ್ಧವಾಗಿ ಸಹಜ ಲಕ್ಷಣಯುತವಾಗಿವೆ. ಮೈಮೇಲೆ ರೇಖಾ ಚಿತ್ರದ ಅಲಂಕರಣವಿದೆ. ಹಂದಿಯ ಮೈಮೇಲೆ ತ್ರಿದಳ ಮತ್ತು ಅಂಕು–ಡೊಂಕಿನ ರೇಖೆಯ ಚಿತ್ರಗಳಿವೆ. ಇವುಗಳಲ್ಲಿಯ ಚಿತ್ರಕಾರನ ಸೂಕ್ಷ್ಮ ದೃಷ್ಟಿ ಹಾಗೂ ವೈಶಿಷ್ಟ್ಯಪೂರ್ಣ ರೇಖೆಗಳು ಪ್ರಶಂಸನೀಯ.

## ರೇಖಾಕೃತಿಗಳು ಮತ್ತು ಹಸ್ತಾಕೃತಿಗಳು

ಕ್ರಮವಾಗಿ ಪರಸ್ಪರ ಛೇದಿಸಿದ ಓರೆ ರೇಖೆಗಳ ಹಾಗೂ ಸಂಕಲನ ಚಿಹ್ನೆಯುಳ್ಳ ಚತುರ್ಭುಜಾಕೃತಿ ಮತ್ತು ವೃತ್ತಾಕೃತಿಗಳು, ಒಂದರ ಮೇಲೆ ಒಂದರಂತೆ ಇರುವ ಕೋನಗಳ ಸಾಲು ಒಂದು ಆಯತ ಚತುರ್ಭುಜದಲ್ಲಿ ಎರಡು ಭಾಗಗಳಿದ್ದು, ಒಂದೊಂದರಲ್ಲಿಎಂಟರಂತೆ ಒಂದೊಂದು ಭಾಗದಲ್ಲಿ ಕೋನಗಳ ಸಾಲು, ಒಂದು ಕೋಲಿಗೆ ಎರಡು ಬದಿಗಳಿಗೆ ಎರಡೆರಡು ಬಾವುಟವಿರುವ ಚಿತ್ರ, ಅಡ್ಡಾದಿಡ್ಡಿಯಾಗಿ ಬಿಡಿಸಿದ ಹಸ್ತ ಚಿತ್ರ ಇವೇ ಮೊದಲಾದ ಚಿತ್ರಗಳು ಅಲ್ಲಲ್ಲಿ ಕಲ್ಲಾಸರೆ ತುಂಬ ಇವೆ. ಇವುಗಳಲ್ಲಿ ಚತುರ್ಭುಜಾಕೃತಿಗಳೇ ಹೆಚ್ಚು.

ಮೊದಲನೆ ಮೂರು ಪ್ರಕಾರಗಳ ಚಿತ್ರಗಳು ಮೊದಲ ಘಟ್ಟದವು. ನಾಲ್ಕನೇ ಮತ್ತು ಐದನೇ ಪ್ರಕಾರಗಳು ಕ್ರಮವಾಗಿ ಎರಡು ಮತ್ತು ಮೂರನೆ ಘಟ್ಟಗಳಿಗೆ ಸೇರಿದವೆಂದು ತರ್ಕಿಸಬಹುದು. ಪ್ರಾಣಿಗಳು ಬಹುಮಟ್ಟಿಗೆ ಮೊದಲು ಘಟ್ಟದವು. ಪ್ರಾಯಶಃ ಆದಿ ಇತಿಹಾಸ ಕಾಲದವು. ಎರಡನೇ ಘಟ್ಟದವು ಬಾದಾಮಿ ಚಾಲುಕ್ಯ ಕಾಲದ ನಂತರದವೆಂದು ಶೈಲಿ ಮತ್ತು ಲಕ್ಷಣಗಳಿಂದ ತರ್ಕಿಸಬಹುದು.

## 4. ಮಾನ್ವಿ

ರಾಯಚೂರು ಜಿಲ್ಲೆಯ ತಾಲೂಕು ಕೇಂದ್ರವಾದ ಈ ಊರಿನ ಪಶ್ಚಿಮ ಬದಿಗಿರುವ ಕಲ್ಲುಗುಡ್ಡದಲ್ಲಿಯ ಒಂದು ಗವಿಯಲ್ಲಿ ವರ್ಣಚಿತ್ರಗಳಿರುವುದರಿಂದ "ರಂಗೋಲಿ ಗವಿ'' ಎಂದು ಸ್ಥಳೀಯವಾಗಿ ಹೆಸರುವಾಸಿಯಾಗಿದೆ. ಇದರೊಳಗೆ ಸುರಳಿ ಚಿತ್ರಪಟದಂತೆ ಸಾಲು ಸಾಲಾಗಿ ವರ್ಣಚಿತ್ರ ಪಟ್ಟಿಕೆಗಳಿವೆ. ಮೊದಲು ಬಿಳಿ ಬಣ್ಣವನ್ನು ಬಳಿದು ಅದರ ಮೇಲೆ (ಪೌರಾಣಿಕ?) ಕಥಾನಕ ಚಿತ್ರಗಳನ್ನು ಕೆಮ್ಮಣ್ಣಿನ ಬಣ್ಣದಲ್ಲಿ ನೈಜವಾಗಿ ಬಿಡಿಸಲಾಗಿದೆ. ಪಟ್ಟಿಕೆಗಳ ಎರಡೂ ಅಂಚುಗಳಲ್ಲಿ ವಜ್ರಾಕೃತಿಗಳ ಸಾಲು ಚಿತ್ರಗಳಿವೆ. ಮಬ್ಬಾಗಿರುವುದರಿಂದ ಕಥೆಯನ್ನು ಮತ್ತು ವ್ಯಕ್ತಿಗಳನ್ನು ಗುರುತಿಸುವುದು ಕಷ್ಟ ಸಾಧ್ಯ. ಈ ಪಟ್ಟಿಕೆಗಳು ಸಾಂಚಿಯಲ್ಲಿ ಮಹಾಸ್ತೂಪದ ತೋರಣಗಳಲ್ಲಿಯ ಸುರುಳಿ ಚಿತ್ರ ಪಟದ ಶಿಲ್ಪಗಳನ್ನು ನೆನಪಿಗೆ ತರುತ್ತದೆ. ಇವು ಶೈಲಿಯಿಂದ ವಿಜಯನಗರ ಕಾಲದವು. ಒಂದು ಅಪೂರ್ವ ಗವಿ ವರ್ಣಚಿತ್ರ. ಶಿಷ್ಟ ಸಂಪ್ರದಾಯಕ್ಕೆ ಸೇರಿದವು. □

# 5. ಬಯಲು ಬಂಡೆ ಚಿತ್ರಗಳು

ಬಯಲು ಬಂಡೆ ಚಿತ್ರಗಳ ಕ್ರಮ ಸಹಜವಾಗಿ ಭಿನ್ನವಾಗಿದೆ. ದೊಡ್ಡ ದೊಡ್ಡ ಬಂಡೆಗಳ ರಾಶಿಯಂತಿರುವ ಬೆಟ್ಟಗಳ ಮಧ್ಯದ ಮತ್ತು ಮೇಲಿನ ಹಂತಗಳಲ್ಲಿ ಬಯಲಿನಲ್ಲಿರುವ ಅಲ್ಲೊಂದು ಇಲ್ಲೊಂದು ಬಂಡೆಯ ಸಮಾನ ಮೇಲ್ಮೈಯ ಮೇಲೆ ಬೇಕಾದ ಚಿತ್ರವನ್ನು ಮೂಡಿಸುವುದಕ್ಕೆ ಅನುಕೂಲಕರವಾದ ಕಲ್ಲಿನಿಂದ ಏಕಪ್ರಕಾರವಾಗಿ ಕುಟ್ಟಿ ಕುಟ್ಟಿ ಬಿಡಿಸುವುದು; ಇಲ್ಲವೆ ಉಳಿಯಂತಹ ಮೊನೆಚಾದ ಉಪಕರಣದಿಂದ ಗೆರೆಗಳನ್ನು ಮೂಡಿಸುವುದು. ಕೆಲವೊಂದು ನೆಲೆಗಳಲ್ಲಿ ಇವೆರಡು ತರಹದ್ದು ಇವೆ. ಕುಟ್ಟಿದ/ಊರಿದ ಚಿತ್ರಗಳು ಹೆಚ್ಚಾಗಿ ಕಲ್ಲೂರು (ರಾಯಚೂರು ತಾ.), ಬೆಳಗಲ್ಲು ಮತ್ತು ಹಳಕುಂಡಿ (ಬಳ್ಳಾರಿ ಜಿಲ್ಲೆ), ಗೀರುರೇಖಾ ಚಿತ್ರಗಳು ಚಿತ್ರದುರ್ಗ, ಬ್ರಹ್ಮಗಿರಿ ಹಾಗೂ ಇವೆರಡೂ ಭಿಲ್ಲಮರಾಯನಗುಡ್ಡ (ಲಿಂಗಸುಗೂರು ತಾ.) ಹಳಕುಂಡಿ ಮೊದಲಾದೆಡೆಗಳಲ್ಲಿವೆ. ಅಪರೂಪವಾಗಿ ಲೋಹದ ಉಪಕರಣದಿಂದ ಬಿಡಿಸಿದ ಹಾಗೂ ಒಂದೇ ಸಮ ಕುಟ್ಟಿದ ಚಿತ್ರಗಳೂ ಇವೆ. ಭಿಲ್ಲಮರಾಯನಗುಡ್ಡದಲ್ಲಿಯ ಇತಿಹಾಸ ಕಾಲದ ಹುಲಿಯ ಚಿತ್ರವು ಇದಕ್ಕೆ ಒಂದು ಉತ್ತಮ ನಿದರ್ಶನ. ಇದರಲ್ಲಿ ಕುಟ್ಟುವಿಕೆ ಮತ್ತು ಗೀರುವಿಕೆ ಇವೆರಡು ತಂತ್ರಗಳನ್ನು ಬಳಸಲಾಗಿದೆ.

ಚಿತ್ರಗಳಲ್ಲಿ ಗೂಳಿಗಳೇ ಬಹಳ. ಕಾಡುಕೋಣ, ಜಿಂಕೆಗಳು ಕಡಿಮೆ. ಮನುಷ್ಯನ ಚಿತ್ರವು ತೀರ ಕಡಿಮೆ. ಇತ್ತೀಚಿನ ಕಾಲದ ಚಿತ್ರಗಳಲ್ಲಿ ರೇಖಾ ಚಿತ್ರಗಳು, ಮುಸಲ್ಮಾನ ಪಂಥದ ಪಂಜ, ಹನುಮಾನ್, ರೈಲುಬಂಡಿ ಮೊದಲಾದ ಚಿತ್ರಗಳೂ ಇರುತ್ತವೆ. ಶಂಖದ ಹುಳುವಿನ ಚಿತ್ರವೂ ಅಪ್ಪಯ್ಯನಹಳ್ಳಿ ಮತ್ತು ಚಿತ್ರದುರ್ಗದಲ್ಲಿದೆ. ಒಂದೊಂದು ಬಂಡೆಯ ಮೇಲೆ ಸಾಮಾನ್ಯವಾಗಿ ಒಂದೇ ಚಿತ್ರವಿದೆ. ಹೀಗೆ ಅಕ್ಕಪಕ್ಕದ ಬಂಡೆಗಳ ಮೇಲೆ ಹಲವಾರು ಚಿತ್ರಗಳಿರುತ್ತವೆ.

ಕಜೂರು ಮತ್ತು ಉಸ್‌ಗಾಲಿಮೋಲ್ (ರೇಪೆಮ ತಾ. ಗೋವಾ) ಬಂಡೆಯ ಮೇಲೆ ಒಂದರ ಹಿಂದೆ ಒಂದರಂತೆ ಎರಡು ಸಾಲುಗಳಲ್ಲಿ ಒಟ್ಟು ಎಂಟು ಪಶುಗಳ ಪಾರ್ಶ್ವ ದೃಶ್ಯ. ಈ ಸಾಲುಗಳ ಕೆಳಗೆ ಇನ್ನೂ ಕೆಲವು ಅಸ್ಪಷ್ಟ ಚಿತ್ರಗಳಿವೆ. ಕೆಲವುದರಲ್ಲಿ ಮಾತ್ರ ಇಣಿಯಿದೆ. ಹೆಚ್ಚು ಕಡಿಮೆ ಎಲ್ಲವೂ ಗೂಳಿಗಳೆಂದು ಹೇಳಬಹುದು. ಕೋಡುಗಳು ನಾನಾ ಪ್ರಕಾರದಲ್ಲಿವೆ. ಒಂದರದ್ದು ಉದ್ದವಾಗಿದ್ದು, ಹಿಂದಕ್ಕೆ ಪೂರ್ಣವಾಗಿ ಬಗ್ಗಿದ್ದರೆ, ಮತ್ತೊಂದರದ್ದು ಕವಲೊಡೆದ ಕೊಂಬೆಯಂತೆ ಕಾಣುತ್ತದೆ. ಇನ್ನೊಂದರದ್ದು ಕಂಸಗಳಂತಿದ್ದು, ಅತ್ಯಂತ ಚೆಲುವಿನ ಹರಪ್ಪಾ ಗೂಳಿಯನ್ನು

ನೆನಪಿಗೆ ತರುತ್ತದೆ. ಮುಂಡವು ಸಪೂರವಾಗಿ ನೀಳವಾಗಿದ್ದು, ಬಾಲ ಉದ್ದವಿದೆ. ಆದರೆ ಮರ್ಮಾಂಗವನ್ನು ಸರಿಯಾಗಿ, ಇಲ್ಲವೆ ಸರಿಯಾದ ಸ್ಥಾನದಲ್ಲಿ ತೋರಿಸಿಲ್ಲ. ಈ ಪಶುಗಳು ತೆಳ್ಳಗೆ ಸ್ವಲ್ಪ ನಾಜೂಕಾಗಿವೆ. ಹರಪ್ಪಾ ಗೂಳಿಯಂತೆ ಪುಷ್ಟವಾಗಿ ಬಲಿಷ್ಠತೆಯನ್ನು ಸೂಚಿಸುತ್ತಿಲ್ಲ. ಇವು ಗುಂಪು ಗುಂಪಾಗಿ ಮುಂದೆ ಹೋಗುತ್ತಿವೆಯೇನೋ ಎಂದು ಭಾಸವಾಗುತ್ತದೆ. ಆದ್ದರಿಂದ ಸರಳ ರೇಖಾಚಿತ್ರದಲ್ಲಿಯೂ ಓಟವು ಮನಮುಟ್ಟುವಂತೆ ಸೂಚಿಸಿದೆ. ಒಂದು ಗಮನಾರ್ಹ ಅಂಶವೆಂದರೆ, ಕೆಳಗಿನ ಸಾಲಿನಲ್ಲಿಯ ಒಂದೆರಡು ಗೂಳಿಗಳ ಕೋಡುಗಳು ಮೇಲಿನ ಸಾಲಿನ ಗೂಳಿಗಳ ಕಾಲುಗಳಿಗೆ ಸೇರಿಹೋಗಿವೆ. ಸಮೀಪ ಉಸ್‌ಗಾಲಿಮೋಲ್ ಮತ್ತು ಕಾಜೂರುನಲ್ಲಿಯ ತುಂಬ ಬಲಿಷ್ಠವಾದ ಒಂದು ಗೂಳಿ (?) ಚಿತ್ರವಿದೆ. ಇದರಲ್ಲಿ ಕೊಂಬುಗಳು ಮುಂದೆ ಬಾಗಿದ್ದು, ಸಿಟ್ಟಿನಿಂದ ಹಾಯಲು ಬರುತ್ತಿದೆಯೇನೋ ಎಂಬಂತಿದೆ. ಒಂದು ಉತ್ತಮ ಕಲಾಕೃತಿ. ಇನ್ನೊಂದರಲ್ಲಿ ಕ್ಷಕಿರಣದ ಛಾಯಾಚಿತ್ರದಲ್ಲಿ ನೋಡಿದಂತೆ ಶರೀರದ ಒಳಭಾಗವನ್ನು ತೋರಿಸುವ ಪ್ರಯತ್ನವೆಂಬಂತಿದೆ. ಇನ್ನೊಂದು ಮನುಷ್ಯಾಕೃತಿ ಕಾಲುಗಳನ್ನು ಅಗಲಿಸಿ, ಕೈಗಳನ್ನು ಅಡ್ಡಲಾಗಿ ಸ್ವಲ್ಪ ಮೇಲಕ್ಕೆತ್ತಿ ನಿಂತ ವ್ಯಕ್ತಿ. ಮತ್ತೊಂದು ಜನ ಸಾಮಾನ್ಯರಲ್ಲಿ ಬಳಕೆಯಲ್ಲಿರುವಂತೆ ಚಕ್ರವ್ಯೂಹ. ಏಳುಸುತ್ತಿನ ಕೋಟೆ ವಿನ್ಯಾಸದ ಒಂದು ಗಮನಾರ್ಹ ಅಂಶವೆಂದರೆ ಸ್ವಲ್ಪ ಹೆಚ್ಚು ಕಡಿಮೆ ಇದೇ ತರಹದ ಕೋಟೆ ಕುಟ್ಟಿದ ಚಿತ್ರ ಇಟಲಿ ದೇಶದ ವಲ್‌ಕಮೊನಿಕದಲ್ಲಿಯ ನಖನೆಯಲ್ಲಿಯ ಬಂಡೆ 1ರ ಮೇಲೆ ಇದೆ. ಇದು ಇನ್ನೂ ಹೆಚ್ಚು ಅರ್ಥಗರ್ಭಿತವಾಗಿದೆ. ಈ ಚಿತ್ರದ ಮೇಲೆ ಇದರ ಎಡಬದಿಯಲ್ಲಿ ಕತ್ತಿ ಹಿಡಿದ ಯೋಧರ, ಬಲಬದಿಯಲ್ಲಿ ಮೇಲಿನ ಮೂಲೆಯಲ್ಲಿ ಉದ್ದನೆ ಕತ್ತಿನ ಒಂದು ಪಕ್ಷಿಯ ಚಿತ್ರಗಳಿವೆ. ಕೋಟೆಯೊಳಗಿನ ಯೋಧರು ಕೋಟೆಯ ಹೊರಗಿನ ಯೋಧರನ್ನು ಎದುರಿಸುತ್ತಿರುವಂತೆಯೂ ಸತ್ತ ಸೈನಿಕರ ರಕ್ತ ಮಾಂಸವನ್ನು ತಿನ್ನಲು ರಣಹದ್ದುಗಳು ಕಾಯುತ್ತಿರುವಂತೆಯೂ ಕಾಣುತ್ತದೆ. ಆಲಿಮಟ್ಟಿ ಹತ್ತಿರ ಸೀತಿಮನಿ ಗುಡ್ಡದ ಪ್ರದೇಶದಲ್ಲಿ ನೆಲದ ಮೇಲೆ ಬಿಡಿಕಲ್ಲುಗಳಿಂದ ನಿರ್ಮಿಸಿದ ಇಂಥ ಒಂದು ಸಾಲಿನ ಚಕ್ರವ್ಯೂಹ ಕೋಟೆ ವಿನ್ಯಾಸದ ಅವಶೇಷಗಳನ್ನು ಸು. 1964–65ರಲ್ಲಿ ನಾನು ನೋಡಿದ್ದೆ. ಮಧ್ಯಪ್ರದೇಶದಲ್ಲಿಯ ತೀಕ್ಷ್ಣದಲ್ಲಿ ಇಂಥ ಕೋಟೆ ವಿನ್ಯಾಸದ ವರ್ಣಚಿತ್ರವಿದೆ. ಇದು ಬಹುಶಃ ಶಿಲಾ–ತಾಮ್ರ ಸಂಸ್ಕೃತಿಗೆ ಸೇರಿದ್ದೆಂದು ತೋರುವುದು.

ಸೋಂದಾ(ಸಿರ್ಸಿ. ತಾ, ಉ. ಕನ್ನಡ ಜಿಲ್ಲೆ)ದಲ್ಲಿಯ ಚಿತ್ರಗಳೂ ಸ್ವಲ್ಪ ಹೆಚ್ಚು ಕಡಿಮೆ ಗೋವಾದಲ್ಲಿಯ ಗೂಳಿ ಚಿತ್ರಗಳ ತರಹ ಇವೆ. ಆದರೆ ಮುಂದಿನ ಹಿಂದಿನ ಕಾಲುಗಳ ಬುಡದಿಂದ ರೇಖೆಗಳು ಕೆಳಮುಖವಾಗಿ ಮುಂದುವರೆದು ಒಂದು ಗಂಟಿನಲ್ಲಿ ಕೊನೆಗೊಳ್ಳುವುದು ತುಂಬ ಕುತೂಹಲಕಾರಿಯಾಗಿದೆ. ದನಗಳು ಕೂಡಿ ವೇಗವಾಗಿ ಓಡಿ ತಪ್ಪಿಸಿಕೊಳ್ಳದಿರಲಿ ಎಂದು ಒಂದೊಂದು ಮುಂದು ಹಿಂದಿನ ಕಾಲುಗಳಿಗೆ ಹಗ್ಗ ಕಟ್ಟುವುದುಂಟು. (ಕುತ್ತಿಗೆಗೆ ಕುಂಟೆ ಕಟ್ಟುವುದೇ ಹೆಚ್ಚು, ಆದರೆ ಕುದುರೆಗೆ ಹೀಗೆ ಹಗ್ಗ ಕಟ್ಟುವುದುಂಟು.) ಇಲ್ಲವೆ ಗಾವಳಿಯಲ್ಲಿರುವಂತೆ

ಬ್ರಾಹ್ಮೀ ವರ್ಣಮಾಲೆಯ 'ಮ' (ಹರಪ್ಪಾ ಲಿಪಿಯಲ್ಲಿ ಈ ಸಂಕೇತವೂ ಅಡ್ಡವಾಗಿರುತ್ತದೆ) ಎಂಬ ಅಕ್ಷರದಂತಿರುವ ಒಂದು ಸಂಕೇತವೇ?

ದಿನಾಂಕ 6–10–1975ರ ಡೆಕ್ಕನ್‌ಹೆರಾಲ್ಡ್ ವೃತ್ತ ಪತ್ರಿಕೆಯಲ್ಲಿ ಅಂಕೋಲಾ ಬಳಿಯ ಬಂಡೆಯ ಮೇಲಿನ ರೇಖಾ ಚಿತ್ರಗಳ ಬಗ್ಗೆ ವರದಿಯಾಯಿತು. ಅದನ್ನು ಓದಿ ಮರುದಿನವೇ ಆ ರೇಖಾಚಿತ್ರಗಳ ನೆಲೆಯನ್ನು ಪರಿಶೀಲಿಸಿದೆ. ಅಂಕೋಲದಿಂದ ಸುಮಾರು ಒಂದೂವರೆ ಕಿ.ಮೀ. ಆಗ್ನೇಯ ದಿಕ್ಕಿಗಿರುವ ಬೋಳೆ ಪ್ರದೇಶದಲ್ಲಿ ಈ ಚಿತ್ರಗಳಿವೆ. ವಿಶಾಲ ಸಮತಟ್ಟಾದ ಜಂಬಿಟ್ಟಿಗೆಯ ಕಲ್ಲಿನ ಮೇಲೆ ಎರಡು ಎದುರುಬದುರಾಗಿ ನಿಂತಿರುವ ಗೂಳಿಗಳು ಅಥವಾ ಹಸುಗಳು, ಸೊಂಡಿಲನ್ನು ಎತ್ತಿದ ಆನೆ, ಹಾವು, ಜಿಂಕೆ, ಮೀನು ಮತ್ತು ನಾಲ್ಕು ಭಾಗಗಳುಳ್ಳ ಒಂದು ಆಯತಾಕೃತಿ ಇಷ್ಟು ಚಿತ್ರಗಳಿವೆ. ಈ ಚಿತ್ರಗಳ ಸಮೀಪದಲ್ಲಿಯೇ ಕ್ರಿ.ಶ. 1–2ನೇ ಶತಮಾನದ ಒಂದು ಇಟ್ಟಿಗೆಯ ಶಿವ ದೇವಾಲಯವಿದ್ದಿತು. ಆದರೆ ಇದು ಪೂರ್ಣ ಹಾಳಾಗಿ ಹೋಗಿದೆ. ಇಲ್ಲಿಂದ ಸುಮಾರು ಎರಡು–ಎರಡೂವರೆ ಕಿ.ಮೀ. ದೂರದಲ್ಲಿರುವ ಬೆಲೆಕೆರೆಯಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆ ಇದೆ. ತುಲನಾತ್ಮಕವಾಗಿ ಇದರ ಕಾಲಮಾನ ಸುಮಾರು ಕ್ರಿ.ಪೂ. 5000.

ಈ ಚಿತ್ರಗಳ ಶೈಲಿ ಹಾಗೂ ಮಾದರಿಗಳನ್ನು ಗಮನಿಸಿದರೆ, ಇವು ಸುಮಾರು 1 ಕಿ.ಮೀ. ಪಶ್ಚಿಮಕ್ಕಿರುವ ಶಿವ ದೇವಾಲಯದ ಕಾಲದ್ದಲ್ಲವೆಂದು ಹೇಳಬಹುದು. ಇನ್ನು ಸ್ವಲ್ಪ ದೂರದಲ್ಲಿರುವ ಸೂಕ್ಷ್ಮ ಶಿಲಾಯುಗದ ನೆಲೆಯನ್ನೂ ಗಮನಿಸಿದಾಗ ಈ ಚಿತ್ರಗಳ ಸಮೀಪದಲ್ಲೂ ಈ ಸಂಸ್ಕೃತಿಯ ಅವಶೇಷಗಳು ದೊರೆಯಬಹುದು. ಪ್ರಾಯಶಃ ಈ ಚಿತ್ರಗಳು ಈ ಸಂಸ್ಕೃತಿಯ ಕಾಲದ್ದಾಗಿರಬಹುದೇನೋ. ಆದರೆ ರೇಖೆಗಳ ಲಕ್ಷಣಗಳನ್ನು ಪರಿಶೀಲಿಸಿದಾಗ ಈ ಚಿತ್ರಗಳು ಬಹುಮಟ್ಟಿಗೆ ಶಿಲಾ–ತಾಮ್ರಯುಗ–ಆದಿ ಬೃಹತ್ ಶಿಲಾ ಸಂಸ್ಕೃತಿಕಾಲದ್ದೆಂದು ತೋರುತ್ತದೆ.

ಸೋಂದಾದಲ್ಲಿಯ ಪಶುಗಳ ಚಿತ್ರಗಳಲ್ಲಿ ಮುಂದಿನ ಹಿಂದಿನ ಕಾಲುಗಳಿಂದ ಕೆಳಮುಖವಾಗಿ ಇಳಿದು ಒಂದು ಗುಣಿಸಿನಾಕೃತಿಯಲ್ಲಿ ಸೇರಿಕೊಳ್ಳುತ್ತವೆಯೆಂದು ಮೇಲೆ ಹೇಳಿದೆಯಷ್ಟೆ. ಗಾವಳಿ(ಕುಂದಾಪುರ ತಾ. ದ. ಕನ್ನಡ ಜಿ.)ಯಲ್ಲಿ ಇಂಥ ಪಶುವಿನ ಕಾಲುಗಳಿಂದಿಳಿದ ರೇಖೆಗಳು ಎಂಟು ಗುಣಿಸಿನ ದ್ವಿಚತುರ್ಭುಜಾಕೃತಿಯನ್ನು ತಾಳುತ್ತದೆ. ಒಂದು ದೊಡ್ಡ ಗುಂಡುಕಲ್ಲಿನ ಮೇಲೆ ಈ ಚಿತ್ರವಿದೆ. ಈ ಪಶುವಿನ ಮುಂದೆ ಇದಕ್ಕೆ ಎದುರಾಗಿ ಇನ್ನೊಂದು ಪಶುವಿನ ಚಿತ್ರವಿದೆ. ಇದರ ಕೋಡುಗಳ ನಡುವೆ ಯಾವುದೋ ಒಂದು ಅಕ್ಷರದ ಹಾಗೆ ಸಣ್ಣ ರೇಖಾ ಚಿತ್ರವಿದೆ. ಹರಪ್ಪಾ ಲಿಪಿಮಾಲೆಯ ಒಂದು ಅಕ್ಷರಕ್ಕೆ ನಿಕಟವಾಗಿ ಹೋಲುತ್ತದೆ. ಡಾ. ಎಸ್.ಆರ್. ರಾವ್ ಅವರ ಹರಪ್ಪಾ ಲಿಪಿಯ ಅಧ್ಯಯನದ ಪ್ರಕಾರ ಬಹುಮಟ್ಟಿಗೆ ಈ ಅಕ್ಷರವು 'ಕ' ಎಂದಾಗುತ್ತದೆ. ಒಂದೇ

ಪ್ರಾಣಿ ಚಿತ್ರದೊಂದಿಗೆ ಒಂದೇ ಅಕ್ಷರವಿರುವ ಹರಪ್ಪಾ ಮುದ್ರಿಕೆಗಳು ಹಲವಾರು ಇವೆ. ಈ ಸ್ಥಳದ ಮತ್ತೊಂದು ಮೊಹೆಂಜೊಧಾರೊವಿನಲ್ಲಿಯ ಹರಪ್ಪಾ ನಾಗರಿಕತೆಯ ನೆಲೆಯಲ್ಲಿ ದೊರೆತ ಒಂದು ಮುದ್ರಿಕೆ ಮೇಲಿನ ಚಿತ್ರದಲ್ಲಿಯ ಪಶುವಿನ ಮುಂದೆ, ಮೂಲೆಗಳಲ್ಲಿ ಗಂಟುಗಳುಳ್ಳ ಪರಸ್ಪರ ಛೇದಿಸಿರುವ ಎರಡು ಚತುರ್ಭುಜಾಕೃತಿಗಳಿವೆ. ಬಂಡೆಯ ಮೇಲೆ 'ಕ' ಅಕ್ಷರ ಸಂಕೇತವುಳ್ಳ ಗೂಳಿಯ ಚಿತ್ರವಿದೆ. ಇಲ್ಲಿ ಒಂದು ಕುತೂಹಲಕಾರಿ ಅಂಶವಿದೆ. ದ್ವಿಚತುರ್ಭುಜಾಕೃತಿಯು ಚಿಕ್ಕ ರಾಮಪುರ (ಗಂಗಾವತಿ ತಾ. ರಾಯಚೂರು ಜಿಲ್ಲೆ)ದ ವರ್ಣಚಿತ್ರ 1ರಲ್ಲಿ ಇದೆ. ಅಷ್ಟೇ ಅಲ್ಲ, ಇಂಥ ಚಿತ್ರವನ್ನು ಈಗಲೂ ಕೆಲವು ವೈದಿಕ ಧಾರ್ಮಿಕ ಕಾರ್ಯಗಳಲ್ಲಿ ರಂಗೋಲಿಯಲ್ಲಿ ಬಿಡಿಸಿ, ಸಾಂಕೇತಿಕವಾಗಿ 'ನವಗ್ರಹ ಮಂಡಲ'ವೆಂದು ಪೂಜಿಸುತ್ತಾರೆ. ಆದ್ದರಿಂದ ಗಾವಳಿಯ ಚಿತ್ರವನ್ನು ಇಂಥ ಪಶುವನ್ನು ವಾಹನವಾಗುಳ್ಳ ಈಶಾನ(ವಾಹನ ನಂದಿ) ಅಥವಾ ಯಮ (ವಾಹನ ಕೋಣ) ದೇವತೆಯನ್ನು ಸಾಂಕೇತಿಕವಾಗಿ ಪ್ರತಿನಿಧಿಸುತ್ತದೆಯೆ? ಅಥವಾ ಈ ಪ್ರಾಣಿಯನ್ನು ಇಂಥ ಮಂತ್ರಪುರಸ್ಸರ ಮಂಡಲದಲ್ಲಿ ಬಂಧಿಸಿ ಪೂಜಿಸುವ ಒಂದು ವೈದಿಕ ಯಜ್ಞದ ಕುರುಹು ಇರಬಹುದೆ ಎಂಬಿವೇ ಮೊದಲಾದ ಪ್ರಶ್ನೆಗಳೇಳುತ್ತವೆ. 'ೋವಾದಿಂದ ಹಿಡಿದು ಕುಂದಾಪುರದವರೆಗಿನ ಈ ಚಿತ್ರಗಳು ವಿಶಿಷ್ಟವೂ ಕುತೂಹಲಕಾರಿಯೂ ಆಗಿವೆ.

ಹೊಳಲೂರಿನ ಚಿತ್ರದಲ್ಲಿ ಸುಮಾರು ಹನ್ನೆರಡು ಪಶುಗಳಿವೆ. ಸ್ವಲ್ಪ ಪುಷ್ಟವಾಗಿವೆ. ಹೆಚ್ಚಾಗಿ ಹಿಂಬಾಗಿದ ಕೋಡುಗಳ ಪಶುಗಳೇ ಹೆಚ್ಚು. ಒಂದರಲ್ಲಿ ಶರೀರದ ಒಳಭಾಗವನ್ನು ತೋರಿಸಲಾಗಿದೆ. ಕೆಲವು ಎದುರು ಬದುರಾಗಿ ನಿಂತಿದ್ದರೆ, ಮತ್ತೆ ಕೆಲವು ಎಡಗಡೆ ಅಥವಾ ಬಲಗಡೆ ಮುಖ ಮಾಡಿ ನಿಂತಿವೆ. ಈ ಪಶುಗಳ ಮೇಲೆ ಬಂಡೆಯ ತುದಿಯಲ್ಲಿ ಅಂದರೆ ದೂರದಲ್ಲಿ ಕೈಯಲ್ಲಿ ಕೋಲು ಹಿಡಿದು ನಿಂತ ಮನುಷ್ಯನ ಸಣ್ಣ ಆಕೃತಿಯಿದೆ. ಬಂಡೆಯ ಇನ್ನೊಂದು ಬದಿಯಲ್ಲಿ ಆನೆಯ ಒಂದು ದೊಡ್ಡ ಚಿತ್ರ (ಇಡೀ ಬಂಡೆಯನ್ನು ಆವರಿಸಿದೆ), ಮತ್ತೊಂದು ಬದಿಯಲ್ಲಿ ಜೋಡಿ(?) ಹಾವು, ಆಮೆ(?) ಕಮಲ ಪುಷ್ಪದ ಚಿತ್ರಗಳಿವೆ. ಇವೆಲ್ಲವನ್ನು ಒಟ್ಟಾರೆ ನೋಡಿದಾಗ ಇದು ಕಾಡಿಗೆ ಒಬ್ಬನು ಪಶುಗಳನ್ನು ಮೇಯಿಸಲು ತೆಗೆದುಕೊಂಡು ಹೋಗುತ್ತಿರುವ ದೃಶ್ಯವಿರಬಹುದೆ ಎಂಬ ಅನುಮಾನ ಬರುತ್ತದೆ. ಈ ಚಿತ್ರಗಳ ರೇಖೆಗಳು ತುಂಬ ದಪ್ಪವಾಗಿ ಆಳವಾಗಿವೆ.

ಈ ಚಿತ್ರಗಳಲ್ಲಿ ಗೋವಾದಲ್ಲಿಯ ಬಲಿಷ್ಠ ಗೂಳಿಯ, ಸಮೂಹ ಪಶುವಿನ, ಮನುಷ್ಯನ ಮತ್ತು ಕೋಟೆ ಹಾಗೂ ಬೋಳೆಯಲ್ಲಿ ಚಿತ್ರಗಳು ಜಂಬಿಟ್ಟಿಗೆ ಕಲ್ಲಿನ ಸೋಂದಾ ಮತ್ತು ಹೊಳಲೂರಿನ ಚಿತ್ರಗಳು ಕರಿ ವಜ್ರದುಂಡಿ ಕಲ್ಲಿನ (Dolcrite dyke) ಮೇಲೆ ಬಿಡಿಸಲಾಗಿದೆ.

ರೇಖೆಗಳು ದಪ್ಪವಾಗಿ ಆಳವಾಗಿದ್ದು ಚೂಪಾದ ಗಟ್ಟಿಕಲ್ಲಿನ ಲೋಹದ ಉಳಿಯಿಂದ ಕೊರೆಯಲಾಗಿದೆ. ಈ ದಿಶೆಯಲ್ಲಿ ಬ್ರಹ್ಮಗಿರಿಯ ಆನೆ, ಚಿತ್ರದುರ್ಗದ ತಿಮ್ಮರಾಯನ ಕೆರೆಯ ಬಳಿ ಇರುವ ಎಮ್ಮೆ, ಕೋಣ ಚಿತ್ರಗಳ ರೇಖೆಗಳು ಈ ರೀತಿ ಇವೆ.

ಗೋವಾ ಮತ್ತು ಗಾವಳಿ ಚಿತ್ರಗಳ ಸುಮಾರು 1–3 ಕಿ.ಮೀ. ದೂರದಲ್ಲಿ ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿ ಕಲ್ಗೋರಿಗಳ ಒಂದು ನೆಲೆಯಿದೆ. ಇದರಂತೆಯೆ ಇಂಥ ವಿಚಿತ್ರ ರೇಖಾ

ಚಿತ್ರಗಳುಳ್ಳ ಕೇರಳದ ಎಡಕಲ್ ಗುಡ್ಡದ ತಪ್ಪಲಲ್ಲಿ ಬೃಹತ್ ಶಿಲಾ ಗೋರಿಗಳಿವೆ. ಇವೆರಡು ಸ್ಥಳಗಳ ಸುತ್ತಮುತ್ತ ಎಲ್ಲೂ ಈ ಸಂಸ್ಕೃತಿಯ ಹಿಂದಿನ ನೂತನ ಇಲ್ಲವೆ ಶಿಲಾ ತಾಮ್ರಯುಗ ಸಂಸ್ಕೃತಿ ನೆಲೆಗಳು ಶೋಧವಾಗಿಲ್ಲದಿದ್ದರೂ ಗಾವಳಿಯ ದಕ್ಷಿಣಕ್ಕೆ ಸೀತಾನದಿ ಬಯಲಿನಲ್ಲಿ ನಾಲ್ಕು ಸ್ಥಳಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಕಲ್ಲಿನ ಕೊಡಲಿಗಳು ಮತ್ತು ಎಡಕಲ್ ಪ್ರದೇಶದಲ್ಲಿ ಚಿತ್ರಾರಿಯಲ್ಲಿ ಈ ಸಂಸ್ಕೃತಿಯ ಬೂದುವರ್ಣದ ಮೃತ್ ಪಾತ್ರೆಗಳು ಅತಿ ವಿರಳವಾಗಿ ಅಲ್ಲೊಂದು ಇಲ್ಲೊಂದು ಸಿಕ್ಕಿವೆ. ಆದರೆ ಹೊಳಲೂರಿನ ಸಮೀಪವೇ ಇಂಥ ಒಂದು ನೆಲೆಯಿರುವ ಸಾಧ್ಯತೆ ಇದೆ. ಈ ಪ್ರದೇಶವನ್ನು ಕೂಲಂಕಷವಾಗಿ ಶೋಧಿಸಬೇಕಾಗಿದೆ.

ಕಡಲ–ಮಲೆನಾಡು ಪ್ರದೇಶಕ್ಕೆ ಸೇರಿಕೊಂಡಂತೆ ಬಯಲುಸೀಮೆ ಪ್ರದೇಶದಲ್ಲಿಯ ಬೆಟ್ಟಗಳ ಸಾಲುಗಳಲ್ಲಿ ಅಲ್ಲಲ್ಲಿ ಇಂಥ ಗೀರು ಚಿತ್ರಗಳಿರುವುದನ್ನು ಈಗಾಗಲೇ ಗಮನಿಸಲಾಗಿದೆ. ಬೆಳಗಾಂವ, ವಿಜಾಪುರ, ರಾಯಚೂರು–ಬಳ್ಳಾರಿ–ಚಿತ್ರದುರ್ಗ ಪ್ರದೇಶದಲ್ಲಿಯ ನವಿಲುತೀರ್ಥ (ಸೌಂದತ್ತಿ ತಾ.) ಕುಳ್ಳೊಳ್ಳಿ(ಜಮಖಂಡಿ ತಾ.) ಭಿಲ್ಲಮರಾಯನ ಗುಡ್ಡ, ತಾವರಗೇರ, ಮಸ್ಕಿ (ಎಲ್ಲ ಲಿಂಗಸುಗೂರು ತಾ.) ಕಲ್ಲೂರು (ರಾಯಚೂರು ತಾ.) ಕುಪ್ಪಗಲ್, ಹಳಕುಂಡಿ (ಹೊಸಪೇಟೆ ತಾ.) ಮತ್ತು ಚಿತ್ರದುರ್ಗ ನೆಲೆಗಳು ವಿಶೇಷವಾಗಿ ಗಮನಾರ್ಹ. ಈ ಎಲ್ಲ ನೆಲೆಗಳಲ್ಲಿ ಯಥಾ ಪ್ರಕಾರ ಗೂಳಿ, ಆಕಳು (1) ತಕ್ಕಮಟ್ಟಿಗೆ ಜಿಂಕೆಗಳ ಚಿತ್ರಗಳೇ ಹೆಚ್ಚು. ಮನುಷ್ಯಾಕೃತಿಗಳು ತೀರಾ ಕಡಿಮೆ. ರೇಖಾ ಮಂಡಲ ಚಿತ್ರಗಳು ಬಹಳ ಅಪರೂಪ. ಒಟ್ಟಾರೆ ಈ ಚಿತ್ರಗಳನ್ನು ಕಾಲಮಾನದಿಂದ ಮೂರು ವರ್ಗಗಳಾಗಿ ವಿಂಗಡಿಸಬಹುದು:– .. ಪೂರ್ವಭಾವಿ ಇತಿಹಾಸ (ಶಿಲಾ–ತಾಮ್ರ ಮತ್ತು ಬೃಹತ್ ಶಿಲಾ)ಯುಗ, ಆದಿ ಇತಿಹಾಸ ಕಾಲ ಮತ್ತು ಆಧುನಿಕ ವರ್ಣಚಿತ್ರಗಳಂತೆ ಈ ಕಾಲಗಳ ಹೊರತಾಗಿ ಬೇರೆ ಬೇರೆ ಕಾಲದ ಗೀರು ಕುಟ್ಟು ಚಿತ್ರಗಳನ್ನು ನಿಖರವಾಗಿ ಗುರುತಿಸಲಾಗಿಲ್ಲ. ಭಿಲ್ಲಮರಾಯನ ಗುಡ್ಡ, ಮಸ್ಕಿ, ಹಳಕುಂಡಿ ಮತ್ತು ಚಿತ್ರದುರ್ಗದಲ್ಲಿ ಮಧ್ಯಕಾಲೀನ–ಆಧುನಿಕ ಕಾಲದ ಚಿತ್ರಗಳು ತಕ್ಕಮಟಿನ ಸಂಖ್ಯೆಯಲ್ಲಿವೆ. ಈ ಚಿತ್ರಗಳಿರುವ ನೆಲೆಗಳ ಸಮೀಪದಲ್ಲಿ ಶಿಲಾ–ತಾಮ್ರ, ಬೃಹತ್ ಶಿಲಾ ಆದಿ ಇತಿಹಾಸ, ಮಧ್ಯಯುಗೀನ ಕಾಲದ ಜನವಾಸ್ತವ್ಯದ ಪುರಾತತ್ವ ನೆಲೆಗಳಿವೆ.

ರೇಖೆಗಳ ಮತ್ತು ಆಕೃತಿಗಳ ವಿನ್ಯಾಸ ದೃಷ್ಟಿಯಿಂದ ಈ ಚಿತ್ರಗಳಲ್ಲಿ ಕನಿಷ್ಠ ಮೂರು ಶೈಲಿಗಳನ್ನು ಗುರುತಿಸಬಹುದು. (i) ಕಡಲು ಮಲೆನಾಡು ಪ್ರದೇಶದ ಶೈಲಿ; (ii) ಬಯಲುಸೀಮೆ ಶೈಲಿ ಮತ್ತು (iii) ವಿಶಿಷ್ಟವಾದುದು ಒಂದು ವಿನೂತನ ಶೈಲಿ (ಕುಳ್ಳೊಳ್ಳಿಯದು).

ಬ್ರಹ್ಮಗಿರಿಯ ಒಂದು ಪ್ರತ್ಯೇಕ ಬೃಹತ್ ಬಂಡೆಯ ಮೇಲಿನ ಆನೆ, ಚಿತ್ರದುರ್ಗದಲ್ಲಿಯ ತಿಮ್ಮರಾಯನ ಕೆರೆ ಹತ್ತಿರವಿರುವ ಕಾಡುಕೋಣ(?), ಎಮ್ಮೆ ಮತ್ತು ನವಿಲು ತೀರ್ಥದ ಅರುಗಂಟಿನ ದ್ವಿರೇಖಾ ಚಿತ್ರಗಳು, ಕಡಲು–ಮಲೆನಾಡು ಪ್ರದೇಶದ ಶೈಲಿಯಲ್ಲಿವೆ. ಬ್ರಹ್ಮಗಿರಿ ಮತ್ತು ಹೊಳಲೂರಿನ ಆನೆಗಳಲ್ಲಿ ಮಾದರಿ ಮತ್ತು ಶೈಲಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಸಾಮ್ಯವಿದೆ.

ಈ ಮಾದರಿಯ ಮುಖ್ಯವಾಗಿ ಬೆನ್ನಿನ ಬಾಗು ಮತ್ತು ಕುಂಭ ಸ್ಥಳ ಹರಪ್ಪಾ ನಾಗರಿಕತೆಯ
ಮುದ್ರಿಕೆಗಳಲ್ಲಿಯ ಹಾಗೂ ದೈಮಾಬಾದಿನ ಶಿಲಾತಾಮ್ರಯುಗದ ತಾಮ್ರದ (ಕಂಚಿನ) ಗ
ಆನೆಗೆ ಹೋಲುತ್ತದೆ. ತೀರ ಸರಳವಾದ ಕಾಡುಕೋಣ ಚಿತ್ರದಲ್ಲಿ ಈ ಪ್ರಾಣಿಯ ಬಲಿಷ್ಠತೆ ಮತ್ತು
ಗಾಂಭೀರ್ಯವು ಮನಮುಟ್ಟುವಂತಿದೆ.

ಬಯಲು ಸೀಮೆಯ ಚಿತ್ರಗಳಲ್ಲಿ ಮೇಲೆ ಹೇಳಿದಂತೆ ಎರಡು ವಿಧಗಳಿವೆ. ಗೀರು ಚಿತ್ರಗಳ
ಮತ್ತು ಕುಟ್ಟು ಚಿತ್ರಗಳು ಮೊದಲನೆ ವಿಧದ ಚಿತ್ರಗಳು ಭಿಲ್ಲಮರಾಯನಗುಡ್ಡ ಮತ್ತ
ಹಳಕುಂಡಿಯಲ್ಲಿ ವಿಪುಲವಾಗಿವೆ. ತಾವರಗೇರ, ಮಸ್ಕಿ ಬೆಳಗಲ್ ಮತ್ತು ಕಲ್ಲೂರಿನ ಎರಡನೆ
ವಿಧದ ಚಿತ್ರಗಳ ಸೊಗಸು ಮೆಚ್ಚುವಂಥದು.

ಮೊದಲನೆ ವಿಧದ ಚಿತ್ರಗಳಲ್ಲಿ ವಿನ್ಯಾಸದ ಗೆರೆಗಳು ಸಪೂರ ಇವುಗಳನ್ನು ಚೂಪಾ
ಉಪಕರಣದಿಂದ ಗೀರಿ ಅಥವಾ ಒಂದೇ ಪ್ರಹಾರವಾಗಿ ಕುಟ್ಟಿ ಬಿಡಿಸಿರಬಹುದು. ಗುಳಿ: ಆಕಳು(?
ಚಿತ್ರಗಳಲ್ಲಿ ಸಾಮಾನ್ಯವಾಗಿ ಇಣಿಯನ್ನು ಸ್ಪಷ್ಟವಾಗಿ ಮೂಡಿರುತ್ತದೆ. ಈ ಚಿತ್ರಗಳಲ್ಲಿಯ
ಎರಡು ಪ್ರಕಾರಗಳು ಕುತೂಹಲಕಾರಿಯಾಗಿವೆ. ಇವುಗಳ ವೈಶಿಷ್ಟ್ಯ ಕೋಡುಗಳ ವಿನ್ಯಾಸದಲ್ಲಿದ
ಒಂದು ಪ್ರಕಾರದಲ್ಲಿ ಎರಡು ಕೋಡುಗಳು ಸಮತೋಲನವಾಗಿ ಕಂಸಗಳಂತಿವೆ. ಹರಪ್ಪಾ
ಮುದ್ರಿಕೆಗಳಲ್ಲಿಯ ಅತ್ಯುತ್ತಮ ಗೂಳಿಯ ಚಿತ್ರದಲ್ಲಿಯೂ ಹೀಗೆ ಇದೆ. ಇದು ಅದರ
ವೈಶಿಷ್ಟ್ಯ. ಭಿಲ್ಲಮರಾಯನಗುಡ್ಡದ ಒಂದು ದೊಡ್ಡ ಗೂಳಿಯ ಚಿತ್ರವು ಈ ಪ್ರಕಾರಕ್ಕೆ ಉತ್ತಮ
ನಿದರ್ಶನ. ಇದರಲ್ಲಿ ಮತ್ತೊಂದು ವೈಶಿಷ್ಟ್ಯವಿದೆ. ಕೋಡುಗಳ ತುದಿಯು ಸ್ವಲ್ಪ ಹೊರಬಾಗಿರುತ್ತದೆ
ಮಸ್ಕಿ, ಬೆಳಗಳಲ್ಲಿನ ಕುಟ್ಟು ಚಿತ್ರ ಮತ್ತು ಚಿತ್ರದುರ್ಗ ಕೋಟೆಯೊಳಗಿನ ಗೀರು ಚಿತ್ರ ಈ
ರೀತಿಯದಾಗಿವೆ. ಈ ಪ್ರಕಾರದ ಚಿತ್ರವು ಶಿಲಾ–ತಾಮ್ರಯುಗ ಸಂಸ್ಕೃತಿಯ ಮಣ್ಣಿನ ಪಾತ್ರೆಗಳ
ಮೇಲಿನ ಅಪರೂಪದ ಇಂತಹ ವರ್ಣ ಚಿತ್ರದಂತಿದೆ. ಹರಪ್ಪಾ ನಾಗರಿಕತೆಯ ಮುದ್ರಿಕೆಗಳಲ್ಲಿಯ
ಚಿತ್ರದಲ್ಲಿ ಹೀಗಿರುವುದಿಲ್ಲ. ಆದ್ದರಿಂದ ಈ ಚಿತ್ರಗಳ ಒಂದೊಂದು ಪ್ರಕಾರವು ಬೇರೆ ಬೇ
ಜನವರ್ಗಗಳ ಭಿನ್ನ ಪರಂಪರೆಯನ್ನು ಸೂಚಿಸುತ್ತದೆಯೆಂದು ತೋರುವುದು.

ಕಲ್ಲೂರು ದಕ್ಷಿಣ ಭಾರತದಲ್ಲಿಯ ಒಂದು ಅಪರೂಪದ ಶಿಲಾ–ತಾಮ್ರಯುಗ ಸಂಸ್ಕೃತಿಯ
ಜನ ವಾಸ್ತವ್ಯದ ನೆಲೆ. ಬೇರೆ ಎಲ್ಲಿಯೂ ದೊರೆಯದ ಮೂರು ತಾಮ್ರದ ಉದ್ದ ಕತ್ತಿಗಳು ಈ
ಗ್ರಾಮದ ಗುಡ್ಡದಲ್ಲಿ ಆಕಸ್ಮಿಕವಾಗಿ 1940ರ ದಶಕದಲ್ಲಿ ಬೆಳಕಿಗೆ ಬಂದವು. ಪುಣೆ ಹತ್ತಿ
ಚಂದೋಳಿಯಲ್ಲಿಯ ಶಿಲಾ–ತಾಮ್ರಯುಗ ಜನವಾಸ್ತವ್ಯದ ನೆಲೆಯ ಉತ್ಖನನದಲ್ಲಿ ಕಲ್ಲೂರಿ
ಕತ್ತಿ ಮಾದರಿಯ ಒಂದು ತಾಮ್ರದ ಬಾಕು ದೊರೆಯಿತು. ಕಲ್ಲೂರಿನ ಅದೇ ಗುಡ್ಡದ ಒಂದ
ದೊಡ್ಡ ಬಂಡೆಯ ಮೇಲೆ ಕೆಲವು ಕುಟ್ಟು ಚಿತ್ರಗಳಿವೆ. ಅವುಗಳಲ್ಲಿ ಒಂದರ ಹಿಂದೆ ಒಂದು ನಿಂ
ಎರಡು ಎಮ್ಮೆ(?)ಗಳ ದೊಡ್ಡ ಪ್ರಮಾಣದ ಚಿತ್ರವು ತಕ್ಷಣವೇ ನೋಡುವವನ ಗಮ
ಸೆಳೆಯುತ್ತವೆ. ಅವುಗಳ ಈ ಚಿತ್ರಗಳಿಂದಲೇ ಈ ಗುಡ್ಡಕ್ಕೆ "ಎಮ್ಮೆ ಗುಡ್ಡ" ವೆಂದು ಹೆಸರ
ಬಂದಿದೆ. ನಿಲುವಿನಲ್ಲಿ ಮಂದಗತಿ ಇದೆ. ಚಿತ್ರದ ಉದ್ದಗಲಕ್ಕೂ ಒಂದೇ ಸಮನಾಗಿ ತೆಳ್ಳ
ನಿಬಿಡವಾಗಿ ಕುಟ್ಟುರುವುದರಿಂದ ಇಡೀ ಚಿತ್ರವು ಕಪ್ಪು ಕಲ್ಲಿನ ಹಿನ್ನೆಲೆಯಲ್ಲಿ ಒಡೆದದ

ಕಾಣುತ್ತದೆ. ಇವುಗಳ ಕೋಡುಗಳು ಅಂಡಾಕೃತಿಯಂತೆ ಒಂದೇ ರೀತಿಯಲ್ಲಿ ಒಳಬಾಗಿವೆ. ತಿಮ್ಮರಾಯನ ಕೆರೆಯ (ಚಿತ್ರದುರ್ಗ) ಬಳಿ ಇರುವ ಕಾಡುಕೋಣ ಗೀರು ಚಿತ್ರವೂ ಇದೇ ಶೈಲಿಯಲ್ಲಿದೆ. ಸರಳತೆಯಲ್ಲಿ ಇದರ ಚೆಲುವು ದಿಟ್ಟ ಮತ್ತು ಆಕರ್ಷಕ ನಿಸರ್ಗದಲ್ಲಿ ಸೊಂಪಾಗಿ ಬೆಳೆದ ಮೈತುಂಬಿಕೊಂಡ ಕೋಣದ ಬಲಿಷ್ಠತೆಯನ್ನು ಅದರ ಸೊಂಟದ ಭಾಗವನ್ನು ಸಪೂರ ಮತ್ತು ಎದೆಯ ಭಾಗವನ್ನು ವಿಶಾಲ ಮಾಡಿ ಮನ ಮುಟ್ಟುವಂತೆ ಬಿಂಬಿಸಲಾಗಿದೆ.

ಭಿಲ್ಲಮರಾಯನಗುಡ್ಡದ ಚಿತ್ರಗಳಲ್ಲಿ ಹುಲಿಯು ಮತ್ತೊಂದು ಕುತೂಹಲಕಾರಿ ಹಾಗೂ ಗಮನಾರ್ಹ ಚಿತ್ರ. ಇದರ ಕಾಲುಗಳು ಸ್ವಲ್ಪ ಮುಂಚಾಚಿವೆ. ದೇಹದ ಮೇಲಿನ ಬಿಡಿ ಪಟ್ಟೆಗಳನ್ನು ಸೂಚಿಸಲು ಒಂದರ ಹಿಂದೆ ಒಂದರಂತೆ ದಪ್ಪ ರೇಖೆಗಳ ಕೋನಗಳಿವೆ. ಪಟ್ಟೆಗಳನ್ನು ಸೂಚಿಸಿದ ಕ್ರಮ ನೋಡಿದರೆ ಅದು ಒಂದು ಅಪರೂಪ ತಳಿಯ ಹುಲಿಯನ್ನು ಸೂಚಿಸುತ್ತದೆಯೇನೋ ಎಂಬ ಅನುಮಾನ. ಇದನ್ನು ಪರಿಶೀಲಿಸಬೇಕಾಗಿದೆ. ಕುಟ್ಟು ತಂತ್ರದಿಂದ ಕಾಲುಗಳನ್ನು, ದೇಹದ ಉಳಿದ ಭಾಗವನ್ನು ಗೀರು ತಂತ್ರದಿಂದ ಚಿತ್ರಗಳನ್ನು ಬಿಡಿಸಲಾಗಿದೆ. ಹೀಗೆ ಎರಡು ತಂತ್ರಗಳನ್ನು ಒಂದೇ ಚಿತ್ರದಲ್ಲಿ ಬಳಸಿರುವುದನ್ನು ಇದೊಂದೆ ಚಿತ್ರದಲ್ಲಿ ಕಾಣುತ್ತೇವೆ. ತಾಂತ್ರಿಕವಾಗಿ ಇದು ಒಂದು ಅಪರೂಪದ ಚಿತ್ರ. ಚಿತ್ರದುರ್ಗದ ಸಮೀಪ ಚಂದ್ರವಳ್ಳಿಯಲ್ಲಿಯ ಈ ತರಹದ ಸ್ವಲ್ಪ ಹೆಚ್ಚು ಕಡಿಮೆ ಇದೇ ಪ್ರಮಾಣದ ಹುಲಿಯ ಗೀರು ಚಿತ್ರವಿದೆ.

ಹಳಕುಂಡಿಯ ವಿವಿಧ ಚಿತ್ರಗಳಲ್ಲಿ ಜಿಂಕೆಗಳ ಸಮೂಹ ಚಿತ್ರವು ನಿಜಕ್ಕೂ ವಿಶೇಷವಾದುದು. ಉದ್ದನೆ ಊರ್ಧ್ವ ಕೋಡುಗಳು, ನೀಳವಾದ ಮುಂಡ, ಬೆನ್ನಿನ ಮೇಲೆ ಮಧ್ಯ ಪಟ್ಟೆಯನ್ನು ಸೂಚಿಸುವ ಪ್ರತ್ಯೇಕ ಗೆರೆಯ ಮೂಲಕ ಈ ಪ್ರಾಣಿಯ ಮುಖ್ಯ ಹಾಗೂ ವಿಶಿಷ್ಟ ಲಕ್ಷಣಗಳನ್ನು ಎತ್ತಿ ತೋರಿಸಲಾಗಿದೆ. ಒಂದು ಗುಂಡುಕಲ್ಲಿನ ಮೇಲಿನ ಜಿಂಕೆ ಚಿತ್ರದಲ್ಲಿ ಅದರ ಬೆನ್ನಿನಲ್ಲಿ ಬಾಣ ಅಥವಾ ಈಟಿ ನಾಟಿರುವುದು ಸ್ಪಷ್ಟವಾಗಿದೆ.

ಮಸ್ಕಿಯಲ್ಲಿಯ ಮನುಷ್ಯಾಕೃತಿಯ ಕುಟ್ಟುಚಿತ್ರಗಳಲ್ಲಿ ಆಸಕ್ತಿ ಕೆರಳಿಸುವಂಥ ಯಾವುದೇ ಲಕ್ಷಣಗಳಿಲ್ಲ.

ಕುಳ್ಳೊಳ್ಳಿಯ ಎದುರು ಬದುರು ನಿಂತ ಗೂಳಿ ಜೋಡಿಯಲ್ಲಿ ಗೀರು ರೇಖೆಗಳು ಸೂಕ್ಷ್ಮ ಹಾಗೂ ನೇರವಾಗಿವೆ. ಕೋಡುಗಳು ಮುಂಬಾಗಿವೆ. ಇದನ್ನು ಬಿಟ್ಟರೆ ಯಾವುದೇ ಭಾಗಗಳಲ್ಲಿ ಬಾಗುಗಳಿಲ್ಲ. ಇದರಲ್ಲಿ ಸ್ಥೂಲಭಾವಕ್ಕಿಂತ ಒಂದು ರೀತಿಯ ಸೂಕ್ಷ್ಮಭಾವವೇ ಪ್ರಧಾನವಾಗಿದೆ. ಇದೊಂದು ಅಪರೂಪದ ಶೈಲಿ ಮತ್ತು ಮಾದರಿ. ಕುಪ್ಪಗಲ್ಲಿನಲ್ಲಿ ಈ ಮಾದರಿಯ ಜೋಡಿ ಗೂಳಿಯ ಕುಟ್ಟು ಚಿತ್ರವಿದೆ. ಇದು ಪ್ರಾಯಶಃ ಅರ್ವಾಚೀನ ಕಾಲದ್ದು. ಕುಳ್ಳೊಳ್ಳಿಯ ಚಿತ್ರದ ಕಾಲಮಾನವನ್ನು ನಿರ್ಧರಿಸುವುದು ಸಧ್ಯಕ್ಕೆ ಸುಲಭ ಸಾಧ್ಯವಿಲ್ಲ. ಈ ಚಿತ್ರದ ನೆಲೆಯಿಂದ ಸುಮಾರು 2–3 ಕಿ.ಮೀ. ದೂರದಲ್ಲಿ ಶಿಲಾ–ತಾಮ್ರ ಯುಗದ ನೆಲೆಯೇನೋ ಇದೆ. ತೆಕ್ಕಲಕೋಟೆಯ ನೂತನ–ಶಿಲಾ ತಾಮ್ರಯುಗ ಸಂಸ್ಕೃತಿಯ ಪಾತ್ರೆಯ· ಮುಚ್ಚಳದಲ್ಲಿಯ ಮೇಲಿನ ಚಿತ್ರಗಳಲ್ಲಿ ( ಈ ಚಿತ್ರಗಳ ಬಗ್ಗೆ ಮುಂದೆ ವಿವೇಚಿಸಲಾಗಿದೆ) ಒಂದು ಗೂಳಿ(?)ಯ

ಚುಚ್ಚು ಚಿತ್ರಕ್ಕೆ ತಕ್ಕಮಟ್ಟಿಗೆ ಹೋಲಿಕೆ ಇದೆ. ಇದೇ ಸ್ಥಳದಲ್ಲಿ ಕುಳ್ಳೊಳ್ಳಿ ಮಾದರಿಯ ಜೋಡಿ ಗೂಳಿಯ ಚಿತ್ರವೂ ಇದೆ. ಇವೆಲ್ಲವನ್ನು ಗಮನಿಸಿದಾಗ ಪ್ರಾಯಶಃ ಕುಳ್ಳೊಳ್ಳಿ ಚಿತ್ರವೂ ಶಿಲಾ-ತಾಮ್ರಯುಗದ ಕೊನೆಯ ಹಂತದ್ದಾಗಿರಬಹುದು.

ಗುಲ್ಬರ್ಗಾ-ರಾಯಚೂರು-ಬಳ್ಳಾರಿ-ಚಿತ್ರದುರ್ಗ ಪ್ರದೇಶದಲ್ಲಿ ಕುಟ್ಟಿದ, ಕೊರೆದ ಮತ್ತು ವರ್ಣದ ಒಟ್ಟು ಮೂರು ಪ್ರಕಾರಗಳ ಚಿತ್ರಕಲೆಯ ಅವಶೇಷಗಳಿವೆ. ಬಾದಾಮಿ-ಐಹೊಳೆ ಪ್ರದೇಶದಲ್ಲಿ ವಿಶೇಷವಾಗಿ ಕಲ್ಲಾಸರೆ ವರ್ಣಚಿತ್ರಗಳೇ ಹೆಚ್ಚು. ಕಡಲು ಪ್ರದೇಶ ಹಾಗೂ ಮಲೆನಾಡಿನ ಪ್ರದೇಶದಲ್ಲಿ ಕುಟ್ಟಿದ ಚಿತ್ರಗಳಾಗಲಿ, ವರ್ಣಚಿತ್ರಗಳಾಗಲಿ ಬೆಳಕಿಗೆ ಬಂದಿಲ್ಲ. ಇದುವರೆಗೂ ಶೋಧವಾಗಿರುವುದೆಲ್ಲ ಗೀರು ರೇಖಾ ಚಿತ್ರಗಳೇ. ಈ ಪ್ರದೇಶದಲ್ಲಿ ಕಲ್ಲಾಸರೆಯ ಗವಿಗಳು ತೀರ ಕಡಿಮೆ. ವಿಶೇಷವಾಗಿ ಇಂಥವುಗಳಲ್ಲಿ ವರ್ಣಚಿತ್ರಗಳಿರುವುದು ಕಂಡುಬಂದಿರುವುದರಿಂದ, ಇವುಗಳಿಲ್ಲದಿರುವುದಕ್ಕೆ ಇದು ಕಾರಣವಾಗಿರಬಹುದೇನೋ? ಆದರೆ ಕುಟ್ಟಿದ ಚಿತ್ರಗಳಿರಬಹುದಾಗಿತ್ತು. ಈ ಕುತೂಹಲಕಾರಿ ವಿಷಯವು ಬಾದಾಮಿ-ಐಹೊಳೆ ಪ್ರದೇಶಕ್ಕೂ ಅನ್ವಯಿಸುತ್ತದೆ. ಕುಳ್ಳೊಳ್ಳಿಯ ಮತ್ತು ಬಾದಾಮಿಯ ಒಂದೊಂದು ಕೊರೆದ ಚಿತ್ರಗಳು ಸಧ್ಯಕ್ಕೆ ಒಂದು ಅಪವಾದವೇ. ಈ ರೀತಿಯ ತೋರುಗಾಣಿಕೆಯ ಚಿತ್ರವರ್ಗಗಳ ಪ್ರಸರಣವು ಸಾಂಸ್ಕೃತಿಕವಾಗಿ ಅರ್ಥಗರ್ಭಿತವಾಗಿದೆಯೆ ಅಥವಾ ಕೇವಲ ಆಕಸ್ಮಿಕವೆ ಎಂಬುದನ್ನು ಮುಂದಿನ ಶೋಧನೆಗಳು ಸಿದ್ಧಮಾಡಬೇಕಾಗಿದೆ. ಆದ್ದರಿಂದ ಇವೆಲ್ಲ ವಿಷಯಗಳನ್ನು ಶೋಧನೆ ಸಮಯದಲ್ಲಿ ಗಮನದಲ್ಲಿಟ್ಟುಕೊಳ್ಳುವುದು ಉಪಯುಕ್ತವೆಂದು ತೋರುತ್ತದೆ. ಗುಲ್ಬರ್ಗಾ-ಚಿತ್ರದುರ್ಗ ಪ್ರದೇಶವು ಇವೆಲ್ಲ ಚಿತ್ರ ಪ್ರಕಾರಗಳ ಸಂಗಮ ಪ್ರದೇಶವೆಂದು ಸಧ್ಯಕ್ಕೆ ಹೇಳಬೇಕಾಗುತ್ತದೆ. ಇಲ್ಲಿ ಇಂಥ ಸಾಂಸ್ಕೃತಿಕ ಸಂಗಮ ಪೂರ್ವಭಾವಿ ಇತಿಹಾಸ ಕಾಲ (Proto-historic)ದ ನೂತನ ಶಿಲಾ ತಾಮ್ರಯುಗ ಹಾಗೂ ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ-ನೆಲೆಗಳ ಪ್ರಸರಣದಲ್ಲಿಯೂ ಕಂಡುಬಂದಿದೆ.

ಈ ಚಿತ್ರಗಳು ಉತ್ತರ ಕರ್ನಾಟಕದ ಪೂರ್ವಭಾಗದ ಬಳ್ಳಾರಿ-ರಾಯಚೂರು-ಚಿತ್ರದುರ್ಗ ಪ್ರದೇಶದಲ್ಲಿಯ ಭಿಲ್ಲಮರಾಯನಗುಡ್ಡ, ಚಂದ್ರವಳ್ಳಿ, ಜಟ್ಟಿಂಗರಾಮೇಶ್ವರ ಚಿತ್ರಗಳಿಗಿಂತ ಸ್ವಲ್ಪ ಮಟ್ಟಿಗೆ ಭಿನ್ನವಾಗಿವೆ. ಈ ಪ್ರದೇಶದ ಚಿತ್ರಗಳೊಡನೆ ಯಾವುದೇ ರೇಖಾ ಸಂಕೇತಗಳಲ್ಲಿ, ಸಮೂಹ ಚಿತ್ರಗಳಲ್ಲಿ ಪರಸ್ಪರ ರೇಖಾ (ಹಂಪಿಯ ಒಂದು ಸ್ಥಳದ ಚಿತ್ರದಲ್ಲಿಯ ಪುರುಷನ ಶಿಶ್ನ ಗೂಳಿಯ ಕೋಡಿಗೆ ಸೇರಿದಂತೆ ಅಸ್ಪಷ್ಟವಾಗಿದೆ) ಸಂಬಂಧವಿಲ್ಲ ಮತ್ತು ಕೆಲವೊಂದು ಚಿತ್ರಗಳನ್ನು ಬಿಟ್ಟರೆ ಸಾಮಾನ್ಯವಾಗಿ ರೇಖೆಗಳು ತೆಳ್ಳಗಿರುತ್ತವೆ. ಈ ವಿಶಿಷ್ಟ ಭಿನ್ನತೆಯನ್ನು ಗಮನಿಸಿದಾಗ ಕಡಲು-ಮಲೆನಾಡು ಪ್ರದೇಶದ ಚಿತ್ರಗಳು ರಾಯಚೂರು-ಬಳ್ಳಾರಿ-ಚಿತ್ರದುರ್ಗ ಪ್ರದೇಶದವುಗಳಿಗಿಂತ ಸ್ವಲ್ಪ ಪ್ರಾಚೀನವೆಂದು ಹೇಳಬಹುದು ಮತ್ತು ಮಲೆನಾಡು ಕಡಲು ಪ್ರದೇಶದ ಚಿತ್ರಗಳಲ್ಲಿಯ ಸಂಕೇತಗಳನ್ನು ಗಮನಿಸಿದಾಗ ಇವುಗಳಿಗೂ ಹರಪ್ಪಾ ಸಂಸ್ಕೃತಿಗೂ ಯಾವುದೋ ದೂರದ ಸಂಬಂಧವಿರಬಹುದೆಂಬ ಅನುಮಾನವಾಗುತ್ತದೆ. □

# 6. ಚಿತ್ರ ಪ್ರಕಾರಗಳು

ಮೇಲೆ ಸಂಕ್ಷಿಪ್ತವಾಗಿ ವಿವರಿಸಿದ ಗವಿ ವರ್ಣಚಿತ್ರಗಳ ಹೊರತು ಉಳಿದವುಗಳಲ್ಲಿ ಬಯಲು ಬಂಡೆ ಚಿತ್ರಗಳೂ ಸೇರಿ, ಹೆಚ್ಚಾಗಿ ಶಿಲಾ–ತಾಮ್ರಯುಗದ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಗಳಿಗೆ ಸಂಬಂಧಿಸಿದ್ದೆಂದು ನಿರ್ಣಯಿಸಬಹುದು. ಆ ಗವಿಗಳಲ್ಲಿ ಬಹಳಷ್ಟು ಮನುಷ್ಯರ, ಗೂಳಿ–ಆಕಳುಗಳ ಮತ್ತು ವಿವಿಧ ವರ್ಗಗಳ ಜಿಂಕೆಗಳ ಚಿತ್ರಗಳೇ ಇವೆ. ಇವುಗಳಲ್ಲಿಯೇ, ಸಾಲಿನಲ್ಲಿ ಕೈ ಕೈ ಹಿಡಿದುಕೊಂಡ ಜನರ ಸಮೂಹ ನೃತ್ಯದ, ಹೊರ ಚಾಚಿದ ತುದಿಯುಳ್ಳ, ಲಯಬದ್ಧ ಕೋಡುಗಳುಳ್ಳ ಗೂಳಿಯ ಚಿತ್ರಗಳು ನರ್ಮದಾ ತೀರ ಹಾಗೂ ಇದರ ಉತ್ತರಕ್ಕಿರುವ ಪ್ರದೇಶಗಳಲ್ಲಿಯ ನವಡಾಟೋಳಿ, ನಾಗದ ಮೊದಲಾದ ಸ್ಥಳಗಳಲ್ಲಿಯ ಉತ್ಖನನಗಳಲ್ಲಿ ದೊರೆತ ಶಿಲಾ–ತಾಮ್ರಯುಗ ಸಂಸ್ಕೃತಿಯ ಮಣ್ಣಿನ ಪಾತ್ರೆಗಳ ಮೇಲಿನ ಚಿತ್ರಗಳಿಗೆ ಹೋಲುವವು.

ಸಾಮಾನ್ಯವಾಗಿ ಈ ಆಕೃತಿಗಳು ಪ್ರಮಾಣಬದ್ಧವಾಗಿ ಭಾವಪೂರ್ಣವಾಗಿರುತ್ತವೆ. ಧಾರ್ಮಿಕ ಇಲ್ಲವೆ ಬೇರೆ ಯಾವ ಉದ್ದೇಶವೇ ಇದ್ದರೂ ಚಿತ್ರಕಾರನು ತನ್ನ ಆಕೃತಿಯು ಚೆಂದವಾಗಿರಬೇಕೆಂಬ ಉದ್ದೇಶವನ್ನು ಇಟ್ಟುಕೊಂಡು ಪ್ರಯತ್ನಪಟ್ಟಿದ್ದಾನೆಂದು ಭಾಸವಾಗುತ್ತದೆ. ತನ್ನ ಧಾರ್ಮಿಕ(ಅಥವಾ ಬೇರೆ) ಉದ್ದೇಶಕ್ಕೆ ಕೇವಲ ಪ್ರಾಣಿಯ ಒಂದು ಸಂಕೇತವಿದ್ದರಾಯಿತು ಎಂಬ ಒಂದು ಸಂಕುಚಿತ ಒಣ ಭಾವನೆ ಇದ್ದ ಪಕ್ಷದಲ್ಲಿ ಆ ಚಿತ್ರದಲ್ಲಿ ಅಂದದ ಅಂಶ ಅನಾವಶ್ಯಕವೆಂದು ಕಡೆಗಣಿಸಬಹುದಾಗಿತ್ತು. ಆದರೆ ಈ ಚಿತ್ರಗಳಲ್ಲಿ ಸೌಂದರ್ಯದ ಅಂಶವಿದೆ.

## ಪಶು–ಪ್ರಾಣಿಗಳು

ಗೂಳಿ ಹಾಗೂ ಕಾಡುಕೋಣ, ಬಹುಮಟ್ಟಿಗೆ ಜಿಂಕೆ ಸಹ ಇವನ ಚಿತ್ರಕ್ಕೆ ಬಲು ಪ್ರಿಯವಾದ ವಸ್ತು. ಮೊದಲ ಎರಡು ಪ್ರಾಣಿಗಳು ನಿರ್ಭಯವಾಗಿ, ಸಹಜವಾಗಿ ನಿಂತಾಗ ಎದ್ದು ಕಾಣುವ ಶ್ರೀಮಂತ ಗಾಂಭೀರ್ಯ ಮತ್ತು ಮೂರನೆಯದರ ಮುಗ್ಧತೆಯನ್ನು ಆ ಸಾದಾ ಗೆರೆಗಳಲ್ಲಿಯೇ ಸೆರೆಹಿಡಿಯಲಾಗಿದೆ. ಅಂಜನಹಳ್ಳಿಯ ಗೂಳಿಯ ಛಾಯಾ ವರ್ಣಚಿತ್ರ, ಬೆಳಗಲ್ಲಿನ ಬಯಲು ಬಂಡೆ ಕುಟ್ಟಿದ ಛಾಯಾಚಿತ್ರ ಮತ್ತು ಚಿತ್ರದುರ್ಗದ ಕಾಡೆಮ್ಮೆಯ ರೇಖಾಚಿತ್ರ ಇದಕ್ಕೆ ಉತ್ತಮ ನಿದರ್ಶನ. ಗಾವಳಿಯಲ್ಲಿಯ ಗೂಳಿಯ ಚಿತ್ರಗಳಲ್ಲಿ ಒಂದೆರಡು ವಿಶೇಷ ಲಕ್ಷಣಗಳಿವೆ.

ಬೇರೆಡೆಗಳಲ್ಲಿ ಮುಖ್ಯವಾಗಿ ಹಿರೆಬೆನಕಲ್‌ನಲ್ಲಿ ಗೂಳಿಯ ಚಿತ್ರದಲ್ಲಿ ಶಿಶ್ನವನ್ನು ತೋರಿಸಲಾಗಿದೆ. ಇಲ್ಲಿ ಶಿಶ್ನ ವಲ್ಲದೆ ವೃಷಣವನ್ನೂ ತೋರಿಸಲಾಗಿದೆ. ಒಂದರ ಇಣಿಯ ಮೇಲೆ ಹಾಗೆಯೆ ಮತ್ತೊಂದರ ಮುಸುಡಿಯ ಮೇಲೆ ಕೊಂಬಿನ ಹತ್ತಿರ ಹರಪ್ಪಾಲಿಪಿಯ ಹಾಗೂ ಬ್ರಾಹ್ಮಿಲಿಪಿ ಮಾಲೆಯ ಅಕ್ಷರಗಳಿಗೆ ಹೋಲುವ ಎರಡು ಸಂಕೇತಗಳಿವೆ. ಒಂದರ ಕಾಲುಗಳಿಗೆ ಸೇರಿದಂತೆ ರಂಗೋಲೆಯಾತಿರುವ ಒಂದು ಚತುರ್ಭುಜ ರೇಖಾ ಚಿತ್ರವಿದೆ. ಇದು ಹರಪ್ಪಾಲಿಪಿ ಮುದ್ರಿಕೆಗಳಲ್ಲಿಯ ಚಿತ್ರಲಿಪಿಗಳಿಗೆ ಸಮೀಪವಾಗಿದೆ. ಈ ಲಕ್ಷಣವು ಅತ್ಯಂತ ಗಮನಾರ್ಹವಾದುದು.

ಈ ಚಿತ್ರಗಳಲ್ಲಿ ಬಿಡಿ ಬಿಡಿಯಾಗಿ ಅಥವಾ ಸಾಲಿನಲ್ಲಿ ವಿವಿಧ ಪ್ರಮಾಣಗಳಲ್ಲಿ ಈ ಪ್ರಾಣಿಗಳ ಚಿತ್ರಗಳಿವೆ. ಕುರುಗೋಡಿನ ಇಕ್ಕಟ್ಟಾದ ವರ್ಣಚಿತ್ರ ಗವಿಯಲ್ಲಿ ಹುಲಿ, ಚಿರತೆ ಮೊದಲಾದ ಭೀಕರ ಪ್ರಾಣಿಗಳ ಚಿತ್ರಗಳೂ ಇವೆ.

ಬಯಲು ಬಂಡೆ ಚಿತ್ರಗಳಲ್ಲಂತೂ ಗೂಳಿ–ಆಕಳಿನ ಚಿತ್ರಗಳೇ ಹೆಚ್ಚು. ಎದುರು–ಬದುರು ನಿಂತ ಪ್ರಾಣಿ ಜೋಡಿಗಳನ್ನು ಚಿತ್ರಿಸುವುದರಲ್ಲಿ ಈ ಪ್ರಾಚೀನ ಚಿತ್ರಕಾರನಿಗೆ ಏನೋ ಒಂದು ಬಗೆಯ ಆಸಕ್ತಿಯೆಂದು ಕಾಣುತ್ತದೆ. ಭಿಲ್ಲಮರಾಯನಗುಡ್ಡದಲ್ಲಿ ಗೂಳಿಗಳ ಜೋಡಿ ಕಂಡು ಬಂದರೆ ಕಲ್ಲೂರಿನಲ್ಲಿ ಕಾಡುಕೋಣ, ಎಮ್ಮೆ ಜೋಡಿಯಿದೆ. ಮೊದಲನೆಯದು ಗೀರಿದ ರೇಖಾಚಿತ್ರ, ಎರಡನೆಯದು ಕುಟ್ಟಿದ ಚಿತ್ರ. ಜಿಂಕೆಯ ಚಿತ್ರವೂ ಗಮನಾರ್ಹ ಪ್ರಮಾಣದಲ್ಲಿದೆ. ಕಾಡುಕೋಣ, ಎಮ್ಮೆ, ಹುಲಿಯ ಚಿತ್ರಗಳು ತೀರ ಅಪರೂಪ. ಹಳಕುಂಡಿಯಲ್ಲಿ ಜಿಂಕೆಗಳ ಚಿತ್ರಗಳು ಬಹಳ ಇವೆ. ಕಲ್ಲೂರು, ಚಿತ್ರದುರ್ಗ, ಭಿಲ್ಲಮರಾಯನಗುಡ್ಡ ಮತ್ತು ಬಂದ್ರವಳ್ಳಿಗಳಲ್ಲಿ ಕ್ರಮವಾಗಿ ಕಾಡುಕೋಣ, ಎಮ್ಮೆ ಮತ್ತು ಹುಲಿಯ ಚಿತ್ರಗಳಿವೆ.

ಹಿರೆಬೆನಕಲ್ಲಿನ 11ನೇ ವರ್ಣಗವಿಯಲ್ಲಿರುವ ಸಾಲು ಜಿಂಕೆಗಳು ತೀರಾ ಗಮನಾರ್ಹವಾದುದ್ದು. ಮರ ಇಲ್ಲವೆ ಚರ್ಮದಲ್ಲಿ ಪ್ರಾಣಿಯ ಚಿತ್ರವನ್ನು ಕತ್ತರಿಸಿಕೊಂಡು ಅದನ್ನು ಬಂಡೆಯ ಮೇಲಿಟ್ಟು ಒಂದು ಪಕ್ಕದಲ್ಲೊಂದರಂತೆ ಸಾಲು ಚಿತ್ರಗಳನ್ನು ತೆಗೆದಂತಿದೆ. ಕ್ರಮವಾಗಿ ಸಾಲಿನ ಎಲ್ಲ ಜಿಂಕೆಗಳನ್ನು ಪ್ರಮಾಣದಲ್ಲಿಯೂ ಆಕಾರದಲ್ಲಿಯೂ ಅವುಗಳ ಭಂಗಿಯಲ್ಲಿಯೂ ಏಕಪ್ರಕಾರವಾಗಿ ಬಿಡಿಸಿರುವುದು ವಿಶೇಷವೇ ಸರಿ. ಆತನೂರಿನಲ್ಲಿ ಜಿಂಕೆಯೊಂದರ ಬೆನ್ನಿನ ಮೇಲೆ ಇರಿದ ಬಾಣವಿರುವ ಚಿತ್ರವಿದೆ. ಹಾಗೆಯೇ ಕುರುಗೋಡಿನಲ್ಲಿಯ ಗಬ್ಬದ ಜಿಂಕೆ ಗಮನಾರ್ಹ. ಇಂತಹ ಚಿತ್ರಗಳು ಮಾಂತ್ರಿಕ ಕಟ್ಟಳೆಗೆ ಸಂಬಂಧಿಸಿರುವುವೆಂಬುದು ಸ್ಪಷ್ಟ. ಹಳಕುಂಡಿಯಲ್ಲಿ ಜಿಂಕೆ ಸಮೂಹದ ಗೀರಿದ ರೇಖಾಚಿತ್ರಗಳಿವೆ. ಈ ಚಿತ್ರಗಳಲ್ಲಿರುವ ವೈಶಿಷ್ಟ್ಯ ವೆಂದರೆ, ಬೆನ್ನಿನ ಮೇಲೆ ಒಂದು ಪ್ರತ್ಯೇಕ ರೇಖೆಯಿದ್ದು, ಅದೇ ಬಾಲವಾಗಿ ಕೊನೆಗೊಳ್ಳುತ್ತದೆ. ಹೀಗೆ ತೋರಿಸಿರುವ ಉದ್ದೇಶವನ್ನು ತಿಳಿದುಕೊಳ್ಳಬೇಕಾಗಿದೆ. ಈ ಪ್ರಾಣಿಗಳಲ್ಲದೆ ಕ್ವಚಿತ್ತಾಗಿ ಆನೆ(ಕುರುಗೋಡು ಮತ್ತು

ಂಜನಹಳ್ಳಿ), ಕೆಚ್ಚಲು ಸಹಿತವಾದ ಆಕಳು (ಹಿರೆಬೆನಕಲ್), ಮೊಸಳೆ (ಆತನೂರು, ಪಿಕ್ಕಿಹಾಳ ುತ್ತು ಹಂಪೆ), ನವಿಲು (ಹಿರೆಬೆನಕಲ್ ಮತ್ತು ಚಿಕ್ಕರಾಮಪುರ)ಕೆಲವೆಡೆಗಳಲ್ಲಿವೆ. ಮೊಸಳೆ ತ್ರದ ಬಗೆಗೆ ಒಂದು ಮಾತು. ಹಂಪೆಯಲ್ಲಿ ಮೊಸಳೆಯುಳ್ಳ ವರ್ಣಚಿತ್ರ ಗವಿಯು ತುಂಗಭದ್ರಾ ದಿಯಂಚಿನಲ್ಲಿದೆ. ಆ ಭಾಗದಲ್ಲಿ ದೊಡ್ಡ ಮಡುವಿದ್ದು ಅಲ್ಲಿ ಮೊಸಳೆಗಳಿವೆಯೆಂದು ಪ್ರತೀತಿ. ದ್ದರಿಂದ ಮೊಸಳೆ ಚಿತ್ರವೂ ಅಲ್ಲಿಯ ಪ್ರಾಣಿಸಂಪದಕ್ಕೆ ಸಹಜವಾದದ್ದು. ಆದರೆ ಪಿಕ್ಕಿಹಾಳ, ತನೂರು ಪ್ರದೇಶಗಳಲ್ಲಿ ಈಗ ಮೊಸಳೆ ವಾಸಿಸುವಂತಹ ನೀರಿನ ಆಶ್ರಯವಿಲ್ಲ. ಬಹಳ ಹಿಂದೆ ದ್ದಿರಬಹುದೆಂದು ಊಹಿಸುವುದಕ್ಕೆ ಪುಷ್ಟೀಕರಿಸುವ ಚಿಹ್ನೆಗಳೂ ಇಲ್ಲ. ಅಂದರೆ ಈ ಪ್ರಾಣಿ ೊಸಳೆ ಜಾತಿಗೆ ಸೇರಿದ ಉಡವಿರಬಹುದೆ? ಇವತ್ತಿಗೂ ಈ ಭಾಗದಲ್ಲಿ ಕಾಡುಜನರು ಉಡವನ್ನು ೇಟೆಯಾಡುತ್ತಾರೆ. ಅದರಿಂದ ತೆಗೆದ ಎಣ್ಣೆಯು ಬಹುಕಾಲದ ಕೀಲುನೋವನ್ನು ವಾಸಿಮಾಡುತ್ತದೆಂದು ೇಳುವುದುಂಟು. ಅಂತಹ ಎಣ್ಣೆಯನ್ನು ಅವರು ಪೇಟೆಗಳಿಗೆ ತಂದು ಮಾರುತ್ತಾರೆ. ಉಡವು ಯಾವ ವಸ್ತುವನ್ನಾದರೂ ಕಚ್ಚಿ ಹಿಡಿದರೆ ಆನೆಯು ಕೂಡ ಅದನ್ನು ಜಗ್ಗಿ ಎಳೆದು ಕಚ್ಚಿದ್ದನ್ನು ಿಡಿಸಲು ಸಾಧ್ಯವಿಲ್ಲವಂತೆ. ಅಷ್ಟು ಅದರ ಶಕ್ತಿ ಎಂದು ನಂಬಿಕೆ. ಆದ್ದರಿಂದ ಮರಾಠರು ಮತ್ತು ಿಜಯನಗರದ ನಾಯಕರು ಶತ್ರುಗಳ ಕೋಟೆಗಳ ಆಕ್ರಮಣದಲ್ಲಿ ಉಡದ ಬಾಲಕ್ಕೆ ಹಗ್ಗ ಕಟ್ಟಿ ೋಟೆಯ ಮೇಲಕ್ಕೆ ಎಸೆಯುತ್ತಿದ್ದರು. ಅದು ಅಲ್ಲಿ ಕಚ್ಚಿ ಹಿಡಿದಿರುತ್ತಿತ್ತು. ಸೈನಿಕರು ಆ ಗ್ಗವನ್ನು ಹಿಡಿದು ಕೋಟೆ ಏರುತ್ತಿದ್ದರೆಂದು ಪ್ರತೀತಿ. ಈ ವಿಷಯ ಹೇಗೇ ಇರಲಿ, ಪುರಾತನ ಾಲದಿಂದಲೂ ಉಡವು ಮನುಷ್ಯನಿಗೆ ಉಪಯುಕ್ತವಾಗಿತ್ತೆಂದು ಹೇಳಲಡ್ಡಿಯಿಲ್ಲ. ಆದ್ದರಿಂದ ಇದು ಮೊಸಳೆಯ ಚಿತ್ರವಾಗಿರದೆ, ಬೆಟ್ಟಗುಡ್ಡಗಳಲ್ಲಿರುವಂತಹ ಈ ಪ್ರಾಣಿವರ್ಗಕ್ಕೆ ಸೇರಿದ ುಡದ ಚಿತ್ರವಾಗಿರಬೇಕು.

ಕುರುಗೋಡಿನ ಆನೆಯ ರೇಖಾಚಿತ್ರದಲ್ಲಿ ಹಿಂಬದಿಯ ಅರ್ಧಭಾಗ ಸ್ಪಷ್ಟವಿದೆ. ಆದರೂ ಈ ್ರಾಣಿಯ ದೈಹಿಕ ದಾರ್ಢ್ಯತೆಯನ್ನು ಪೃಷ್ಠಭಾಗದಲ್ಲಿ ಬೆನ್ನನ್ನು ಕಮಾನಿನಂತೆ ಬಾಗಿಸುವುದರಿಂದ ುತ್ತಿ ತೋರಿಸಲಾಗಿದೆ. ಆದರೆ ಇದರ ಬಾಲ ಸ್ವಲ್ಪ ಉದ್ದ ಮತ್ತು ಉದ್ದಕ್ಕೂ ಕೂದಲಿನಂತೆ ಆಕಡೆ ಈ ಕಡೆ ಸಣ್ಣ ರೇಖೆಗಳಿವೆ. ಇದರ ಬಾಲದ ತುದಿಯಲ್ಲಿ ಕೂದಲಿನ ಸಣ್ಣ ಗೊಂಡೆಯಿರುವುದೆ ಿನಾ ಉದ್ದಕ್ಕೂ ಕೂದಲಿರುವುದಿಲ್ಲ. ಆದ್ದರಿಂದ ಈ ಬಾಲದ ವಿಶಿಷ್ಟ ಲಕ್ಷಣದ ಮರ್ಮವನ್ನು ಳಿಯಬೇಕಾಗಿದೆ. ಬ್ರಹ್ಮಗಿರಿಯಲ್ಲಿ ಮೂಡಿಸಿರುವ ಆನೆಯ ರೇಖಾಚಿತ್ರವು ಆ ಪ್ರಾಣಿಗೆ ತಕ್ಕಂತೆ ವ್ಯವಾಗಿದೆ. ಇಲ್ಲಿ ಚಿತ್ರಕಾರನು ತನ್ನ ಚಿತ್ರವನ್ನು ಬಿಡಿಸುವುದಕ್ಕೋಸ್ಕರ ಬಯಲಿನಲ್ಲಿ ಪ್ರತ್ಯೇಕ ಂದು ದೊಡ್ಡ ಬಂಡೆಯನ್ನೇ ಆರಿಸಿರುವುದು ಅವನ ಚಿತ್ರಕಲೆ ನಿರೂಪಣೆಯಲ್ಲಿರುವ ೌಂದರ್ಯಪ್ರಜ್ಞೆಯನ್ನು ವ್ಯಕ್ತಪಡಿಸುತ್ತದೆ. ಇದರಂತೆಯೆ ಹೊಳಲೂರಿನ ಆನೆಯ ಚಿತ್ರ.

## ಮನುಷ್ಯ ಚಿತ್ರಗಳು

ಮನುಷ್ಯರ ಬಿಂಬಗಳು ಹೆಚ್ಚಾಗಿ ಗವಿ ವರ್ಣಚಿತ್ರಗಳಲ್ಲಿವೆ. ಬಯಲು ಬಂಡೆ ಗೀರು ಮತ್ತು ಟ್ಟಿದ ಚಿತ್ರಗಳಲ್ಲಿ ಇವು ಬಹಳ ಕಡಿಮೆ. ಅಪರೂಪವಾಗಿ ಒಂದೆರಡು ಸ್ಥಳಗಳಲ್ಲಿವೆ.

ಭಿಲ್ಲಮರಾಯನಗುಡ್ಡ, ಮಸ್ಕಿ ಮತ್ತು ಹಿಕ್ಕೆಹಾಳದಲ್ಲಿ ಕೆಲವೇ ಚಿತ್ರಗಳಿವೆ. ಮತ್ತು ಈ ಚಿತ್ರಗ ಹೆಚ್ಚು ಕಡಿಮೆ ಒಂದೇ ರೀತಿಯವು. ಸರಳವಾಗಿ ನಿಂತ ಭಂಗಿ ಅಥವಾ ಅಪರೂಪವಾ ತೋಳುಗಳು ಅಡ್ಡವಿದ್ದು ಕೈಗಳನ್ನು ಮೇಲಕ್ಕೆತ್ತಿರುವುದು, ಇಲ್ಲವೆ ಕೈ ಕೈ ಹಿಡಿದ ಜನರ ಸಾ ವರ್ಣಚಿತ್ರಗಳು: ಹೀಗೆ ವೈವಿಧ್ಯಮಯವಾದುವು. ಸಾಮಾನ್ಯವಾಗಿ ಇಂತಹ ಚಿತ್ರಗಳು ನಿ ಭಂಗಿಯಲ್ಲೆ ಹೆಚ್ಚಾಗಿದ್ದರೂ ಬೇರೆ ಬೇರೆ ರೀತಿಯವು.

ಕೆಲವು ಏಕವ್ಯಕ್ತಿ ಚಿತ್ರಗಳು ಬೃಹದಾಕಾರವಾಗಿ, ತೊಡೆಗಳನ್ನು ಅಗಲಿಸಿ ಸೊಟ್ಟ ಮಾ ನಿಂತ ಭಂಗಿಯಲ್ಲಿವೆ. ಹಿರೆಬೆನಕಲ್ಲಿನ 3ನೇ ವರ್ಣಚಿತ್ರ ಗವಿಯಲ್ಲಿಯ ಚಿತ್ರಗಳು ಸು. 2ಮಿ ಎತ್ತರವಿದೆ. ಆದರೆ ಸಣ್ಣ ತಲೆ, ತೋಳುಗಳು ಅಡ್ಡವಾಗಿದ್ದು, ಕೈಗಳು ಮೇಲಕ್ಕೆತ್ತಲ್ಪಟ್ಟಿವೆ. ಹ ಪಾದಗಳನ್ನು ಬಿಡಿಸಿಲ್ಲ. ನಗ್ನ ದೇಹ. ಶಿಶ್ನವನ್ನು ಸ್ಪಷ್ಟವಾಗಿ ಬಿಡಿಸಲಾಗಿದ್ದು, ಮೈ ತೊ ಮೇಲೆಲ್ಲ ರೇಖಾ ಚಿತ್ರಗಳಿವೆ. ಇದರಂತೆಯೇ ಸಮೀಪದ ಮಲ್ಲಾಪುರದಲ್ಲಿಯ ಚಿಕ್ಕರಾಮಪುರದಲ್ಲಿಯೂ ಒಂದೊಂದು ಛಾಯಾಚಿತ್ರವಿದೆ. ನಾರಾಯಣಪುರದಲ್ಲಿ ಅತಿ ದೊ ಕಲ್ಲಾಸರೆಯ ಚಿತ್ರವು ಅತ್ಯಂತ ದೊಡ್ಡದು. 4 ಮೀ.ಗಿಂತಲೂ ಎತ್ತರವಾದುದು. ಆದೇ ಭಂಗಿ ಸಣ್ಣ ತಲೆ, ತಲೆಯ ಮೇಲಿನ ಸಮಾನಾಂತರ ಸಣ್ಣ ಸಣ್ಣ ಗೆರೆಗಳು ಪ್ರಾಯಶಃ ಕೂದಲನ ಸೂಚಿಸುತ್ತವೆ. ತಲೆಯು ಬಲಕ್ಕೆ ಸ್ವಲ್ಪ ಬಾಗಿದೆ. ಎಡಗೈ ಇಲ್ಲ, ಬಹುಶಃ ಅಳಿಸಿ ಹೋಗಿರಬೇಕು. ಮುಂಡ ಉದ್ದಗಲಗಳು ಪ್ರಮಾಣಬದ್ಧವಾಗಿವೆ. ಪುಷ್ಟವಾದ ತೊಡೆಗಳು, ಯಥಾಪ್ರಕಾರ ಮೈ ತೊಡೆಗ ಮೇಲೆ ರೇಖಾ ಚಿತ್ರಗಳು. ಈ ಚಿತ್ರದ ಎದುರಿನಲ್ಲಿ ಅಡ್ಡವಾಗಿರುವ ಬೃಹತ್ ಬಂಡೆಯ ಮೇ ಎರಡು ಕೈಗಳನ್ನು ಚಾಚಿ, ಕಾಲುಗಳನ್ನು ಅಗಲಿಸಿ ಕುಳಿತ ಒಂದು ವ್ಯಕ್ತಿಯ ಸಣ್ಣ ಚಿತ್ರವಿ ತಲೆಯ ಮೇಲಿನ ಉದ್ದಕೂದಲು ಆಕಡೆ ಈ ಕಡೆ ಸೆಟೆದುನಿಂತಿವೆ. ಹೊಟ್ಟೆ ಸ್ವಲ್ಪ ಉಬ್ಬಿ ಸೊಂಟದ ಕೆಳಭಾಗ ತ್ರಿಕೋಣಾಕೃತಿಯಂತೆ ಕೆಳಚಾಚಿದೆ. ಇದು ಛಾಯಾಚಿತ್ರ. ತಲೆಯ ಕೂದ ಹಳ್ಳಿಗರ ಜಡೆಯಂತೆ ಸೆಟೆದಿರುವುದು, ಗರ್ಭಿಣಿಯಂತೆ ಉಬ್ಬುಹೊಟ್ಟೆ ಪ್ರಾಯಶಃ ಯೋನಿಯನ ಸೂಚಿಸುವ ಸೊಂಟದ ಕೆಳಗಿನ ತ್ರಿಕೋಣಾಕಾರ ಈ ಚಿತ್ರವು ಸ್ತ್ರೀಯದೆಂದು ಸೂಚಿಸುತ್ತ ಇಲ್ಲಿಯ ಹಾಗೂ ಹಿರೆಬೆನಕಲ್ಲಿನ ನಗ್ನಪುರುಷ ಚಿತ್ರಗಳು ಬಾಹ್ಯರೇಖೆ ಶೈಲಿಯಲ್ಲಿವೆ.

ಚಿಕ್ಕರಾಮಪುರದ ಒಂದು ಕಡಿದಾದ ಕಲ್ಲಾಸರೆಯಲ್ಲಿಯ ದೊಡ್ಡ ವರ್ಣಚಿತ್ರವು ಸುಮಾ 8–10 ಮೀ. ಎತ್ತರದಲ್ಲಿ ಚಾವಣಿಯಂತೆ ಅಡ್ಡಚಾಚಿರುವ ಬಂಡೆಯ ಒಳಮೈ ಮೇಲೆ ಇ ನಾರಾಯಣಪುರದ ಚಿತ್ರದಂತೆ ಇದನ್ನು ವಿಶೇಷ ಪ್ರಯತ್ನದಿಂದಲೇ ಬಿಡಿಸಿರಬೇಕು. ಮೇ ವಿವರಿಸಿದ ಎರಡು ಚಿತ್ರಗಳಿಗಿಂತ ಈ ಚಿತ್ರವನ್ನು ಬಿಡಿಸಿದ ರೀತಿ ಭಿನ್ನವಾಗಿದೆ. ಈ ಸಂಪೂ ಛಾಯಾಚಿತ್ರ ಸುಮಾರು 2ಮೀ. ಎತ್ತರವಿರಬಹುದು. ದುಂಡುತಲೆ, ಪ್ರಮಾಣಬದ್ಧ ದೇಹ. ನಿ ಭಂಗಿಯಲ್ಲಿಯೂ ಒಂದು ವೈಶಿಷ್ಟ್ಯವಿದೆ. ತೊಡೆಗಳನ್ನು ಅಗಲಿಸಿಲ್ಲ. ಆದರೆ ಯಥಾ ಪ್ರಕ ಕೈಗಳನ್ನು ಮೇಲಕ್ಕೆತ್ತಿ ನೆಟ್ಟಗೆ ನಿಂತ ಭಂಗಿಯಲ್ಲಿದೆ. ಆದ್ದರಿಂದ ಮೇಲಿನ ಎರಡು ಭಂಗಿಗಳಲ್ಲಿರು ಸಡಿಲತೆಯು ಇದರಲ್ಲಿಲ್ಲ.

ಹಂಪೆಯ 1ನೇ ಗವಿಯಲ್ಲಿ ಮಧ್ಯಮ ಪ್ರಮಾಣದ, ಕೈಗಳನ್ನು ಮೇಲಕ್ಕೆತ್ತಿರುವ ಮನುಷ್ಯನ ಚಿತ್ರವಿದೆ. ಮೈ ಮೇಲೆ ರೇಖಾಚಿತ್ರಗಳಿವೆ. ಈ ಆಕೃತಿ ಸ್ವಲ್ಪ ಕೃಶವಾಗಿದೆ. ಅಷ್ಟೇನೂ ಪ್ರಮಾಣಬದ್ಧವಾಗಿಲ್ಲ. ಹಿರೆಬೆನಕಲ್ಲಿನ 5ನೇ ವರ್ಣಗವಿ ಚಿತ್ರದಲ್ಲಿ ವಿಚಿತ್ರ ವೇಷದ ಮನುಷ್ಯನ ಒಂದು ಬಿಡಿ ಚಿತ್ರವಿದ್ದು, ಇದರಲ್ಲಿ ವ್ಯಕ್ತಿಯ ಕೈಬೆರಳುಗಳನ್ನು ತೋರಿಸುವ ಪ್ರಯತ್ನ ಗಮನಾರ್ಹ. ಬಾಗಿದ ಕೋಡುಳ್ಳ ಮುಖವಾಡ ಮತ್ತು ಬಾಲವನ್ನು ಧರಿಸಿದೆ. ಸಮೀಪದಲ್ಲಿಯೆ ಇದೇ ತರಹದ ಮನುಷ್ಯನ ಸಣ್ಣ ಚಿತ್ರವಿದೆ. ಇದರಲ್ಲಿಯ ಕೋಡುಗಳು ಬಾಗಿವೆ. ಮೊದಲನೆಯ ಚಿತ್ರದ ಮನುಷ್ಯನ ಬಲಿಷ್ಠತೆಯನ್ನು ಅಗಲವಾದ ಎದೆ ಮತ್ತು ಕಿರಿದಾದ ನಡುವಿನಿಂದ ಸೂಚಿಸಲಾಗಿದೆ. ಎರಡನೆಯದು ನೀಳವಾಗಿದೆ. ಇವೆರಡೂ ಛಾಯಾಚಿತ್ರಗಳು, ಇವುಗಳ ಬದಿಯಲ್ಲಿ ಮತ್ತೊಂದು ಅಪರೂಪದ ದ್ವಿರೇಖಾ ನಗ್ನಮನುಷ್ಯನ ಚಿತ್ರವಿದೆ. ಕೈಗಳನ್ನು ಕೆಳಗೆ ಇಳಿಬಿಟ್ಟಿದ್ದಾನೆ.

ಒಂದು ಕಲ್ಲಾಸರೆ ಗವಿಯಲ್ಲಿ ಸಣ್ಣ ಪ್ರಮಾಣದ ಬಿಡಿ ಚಿತ್ರಗಳು ಹಲವಾರು ಇರಬಹುದು. ಹಿರೆಬೆನಕಲ್ಲಿನ 1, 6 ಮತ್ತು 11ನೇ ವರ್ಣಚಿತ್ರ ಗವಿಗಳಲ್ಲಿ ಈ ರೀತಿ ಮನುಷ್ಯನ ಬಿಡಿ ಚಿತ್ರಗಳಿವೆ. 1ನೆಯದರಲ್ಲಿ ಒಂದು ಜೋಡಿ, ಕುದುರೆ ಸವಾರ, ಕೈಗಳನ್ನು ಮೇಲಕ್ಕೆತ್ತಿ ನಿಂತ ಮನುಷ್ಯ, 6ನೆಯದರಲ್ಲಿ ಒಂದು ಹುಲಿಗೆ ಬಾಣ ಬಿಡಲು ಸಿದ್ಧವಾಗಿರುವ ಕುದುರೆ ಸವಾರ ಮತ್ತು 11ನೆಯದರಲ್ಲಿ ಸಂಭೋಗ ಕ್ರಿಯೆಯಲ್ಲಿ ತೊಡಗಿರುವ ಒಂದು ಜೋಡಿ. 1ನೇ ಗವಿಯ ಜೋಡಿನ ಒಂದು ವ್ಯಕ್ತಿಯ ಕೈಯಲ್ಲಿ ಉದ್ದನೆಯ ಕತ್ತಿಯಿಂದ ಮತ್ತೊಂದು ವ್ಯಕ್ತಿಯ ತಲೆಯ ಮೇಲೆ ಸೂರ್ಯನ ಕಿರಣಗಳಂತೆ ಸಣ್ಣ ರೇಖೆಗಳಿವೆ. ಪ್ರಾಯಶಃ ಸ್ತ್ರೀ ಇರಬೇಕು. ಆದ್ದರಿಂದ ಇದು ಗಂಡುಹೆಣ್ಣಿನ ಜೋಡಿ(?) 11ನೆಯದರಲ್ಲಿ ಕೈಗಳನ್ನು ಮೇಲಕ್ಕೆತ್ತಿ ತೊಡೆಗಳನ್ನು ಅಗಲಿಸಿರುವ ಜೋಡಿಯ ಮರ್ಮಾಂಗಗಳಿರುವ ಸ್ಥಾನಗಳನ್ನು ಒಂದು ಗೆರೆಯಿಂದ ಸೇರಿಸಿದೆ. ಇದು ಸಂಭೋಗದ ಸ್ಥಿತಿಯನ್ನು ತೋರಿಸುವ ಒಂದು ರೀತಿ.

ಇದಲ್ಲದೆ, ಕತ್ತಿ ಅಥವಾ ಈಟಿ, ಇಲ್ಲವೆ ಬಿಲ್ಲು ಬಾಣ ಹಿಡಿದಿರುವ ಮನುಷ್ಯರ ಅಥವಾ ಕುದುರೆಸವಾರರ ಬಿಡಿ ಚಿತ್ರಗಳು ಹಿರೆಬೆನಕಲ್ಲಿನ 1,6 ಮತ್ತು 11ನೇ ವರ್ಣಚಿತ್ರ ಗವಿಗಳಲ್ಲಿವೆ. ಒಂದು ಚಿತ್ರದಲ್ಲಿ ಈಟಿಯ ತುದಿಯ ಸುತ್ತಲೂ ಚೂಪಾದ ಮೊನೆಗಳಿವೆ. ಈ ತರಹದ ಆಯುಧವು ವಿಶಿಷ್ಟವಾದುದು. ಕುದುರೆ ಸವಾರರ ಚಿತ್ರಗಳಲ್ಲಿ ಲಗಾಮನ್ನು ತೋರಿಸಿದ ವೈಶಿಷ್ಟ್ಯವನ್ನು ಸ್ವಲ್ಪ ಹಿಂದೆಯೇ ವಿವೇಚಿಸಿದೆಯಷ್ಟೆ.

ಇನ್ನು ಜನಸಮೂಹದ ಚಿತ್ರಗಳು. ಸಾಮಾನ್ಯವಾಗಿ ಸಾಲಿನಲ್ಲಿ ಜನರು ಒಬ್ಬರ ಪಕ್ಕದಲ್ಲಿ ಒಬ್ಬರು ಕೈ ಕೈ ಹಿಡಿದುಕೊಂಡು ನಿಂತಿರುವ ಚಿತ್ರಗಳು ತೆಕ್ಕಲಕೋಟೆ, ಹಿರೆಬೆನಕಲ್ಲಿನ 1,4, 6 ಮತ್ತು 11ನೇ ವರ್ಣಚಿತ್ರ ಗವಿಗಳಲ್ಲಿವೆ. 2 ಅಥವಾ 3 ಜನರ ಸಾಲಿನಿಂದ ಹಿಡಿದು 27 ಜನರ

ಸಾಲುಗಳಿವೆ. ಹಿರೆಬೆನಕಲ್ಲಿನ 12ನೇ ವರ್ಣಚಿತ್ರ ಗವಿಯಲ್ಲಿ 27 ಜನರ ಸಾಲುಗಳಿವೆ. ಈ ಸಾಲಿನ ಒಂದು ತುದಿಯಲ್ಲಿ ಒಬ್ಬ ಹುಡುಗನೂ ಇದ್ದಾನೆ. ಅಪರೂಪವಾಗಿ ಸಾಲಿನಲ್ಲಿ ಒಬ್ಬೊಬ್ಬ ಸ್ತ್ರೀಯರೂ ಇರುವುದುಂಟು. ಸಾಲಿನಲ್ಲಿ ತಲೆಯ ಮೇಲೆ ಕೂದಲಿನಂತೆ ಸಣ್ಣ ರೇಖೆಗಳಿರುವ ಚಿತ್ರವು ಹೆಂಗಸಿನದೆಂದು ಭಾವಿಸಬಹುದು. ಇಂಥ ಚಿತ್ರಗಳು ಹಬ್ಬ ಹರಿದಿನಗಳ ಸಾಲು ಕುಣಿತವನ್ನು ಸೂಚಿಸುತ್ತವೆ. ಇಂತಹ ಸಾಲುಗಳು ಸಾಮಾನ್ಯವಾಗಿ ನೇರವಾಗಿರುತ್ತವೆ. ಆದರೆ ಹಿರೆಬೆನಕಲ್ಲಿನ 12ನೇ ವರ್ಣಚಿತ್ರ ಗವಿಯಲ್ಲಿ ನೇರಸಾಲು ಮಾತ್ರವಲ್ಲದೆ ಅರ್ಧಚಂದ್ರಾಕೃತಿಯ ಸಾಲಿನ ಚಿತ್ರಗಳೂ ಇವೆ. ಬಹುಶಃ ಎರಡನೆಯದು ಜನರು ವೃತ್ತದ ಸಾಲಿನಲ್ಲಿರುವುದನ್ನು ಸೂಚಿಸುವ ಒಂದು ಚತುರ ಪ್ರಯತ್ನ. ಇಂತಹ ಸಾಲುಗಳಲ್ಲಿ ಚಿತ್ರಿಸಿದ ಮನುಷ್ಯ ರೂಪಗಳು ಎರಡು ವಿಧವಾಗಿವೆ. ತೆಕ್ಕಲಕೋಟೆ, ಹಿರೆಬೆನಕಲ್ಲಿನ 1,6 ಮತ್ತು 11ನೇ ವರ್ಣಚಿತ್ರ ಗವಿಗಳಲ್ಲಿಯ ಸಾಲು ಮನುಷ್ಯರ ಚಿತ್ರವು ಸ್ವಲ್ಪ ಹೆಚ್ಚು ಕಡಿಮೆ ಒಂದು ರೀತಿಯದ್ದಾಗಿದ್ದರೆ, ಹಿರೆಬೆನಕಲ್ಲಿನ 4ನೇ ವರ್ಣಚಿತ್ರ ಗವಿಯ ವೆಂಕಟಾಪುರದ 2ನೇ ಕಲ್ಲಾಸರೆ ಚಿತ್ರ ಮತ್ತು ಜಟ್ಟಿಂಗರಾಮೇಶ್ವರದ ಬಯಲು ಬಂಡೆಯಲ್ಲಿ ಮೂಡಿಸಿದ ರೇಖಾಚಿತ್ರ ಮತ್ತೊಂದು ರೀತಿಯದು.

ಮೊದಲನೆಯ ರೀತಿಯಲ್ಲಿ ಚಿತ್ರಗಳು ಛಾಯೆಯಲ್ಲಿರುತ್ತವೆ. ಸ್ವಲ್ಪ ದುಂಡಾದ ತಲೆ, ನೀಳವಾದ ಮುಂಡ, ಮುಖಲಕ್ಷಣಗಳು. ಇದು ಸಹಜವಾದುದು. ಎರಡನೆಯದರಲ್ಲಿ ಅಡ್ಡ ರೇಖೆಯ ಅಥವಾ ಸ್ವಲ್ಪ ವೃತ್ತಾಕಾರದ ತಲೆ, ತ್ರಿಕೋಣಾಕೃತಿಯ ಮುಂಡ ಮತ್ತು ಅಗಲಿಸಿದ ತೊಡೆಗಳು ಇವೆ. ಇದು ದ್ವಿತ್ರಿಕೋಣಾಕೃತಿ ಶೈಲಿಯೆಂದು ವರ್ಣಿಸಬಹುದು. ಮೊದಲನೆಯದು ಸ್ಥೂಲ, ಎರಡನೆಯದು ಸೂಕ್ಷ್ಮ.

## ರೇಖಾ ಚಿತ್ರಗಳು ಮತ್ತು ಮಂಡಲಗಳು

ರೇಖಾ ಚಿತ್ರಗಳು ಕೆಲವೇ ಆಗಿದ್ದರೂ ವೈವಿಧ್ಯಮಯವಾಗಿವೆ. ಇವು ವರ್ಣಚಿತ್ರಗಳಲ್ಲಿಯೇ ಹೆಚ್ಚು. ಬಯಲುಬಂಡೆ ಚಿತ್ರಗಳಲ್ಲಿ ಅಪರೂಪ. ವೆಂಕಟಾಪುರದ 1ನೇ ಕಲ್ಲಾಸರೆಯಲ್ಲಿ ಕೈಗಳನ್ನು ಮೇಲಕ್ಕೆತ್ತಿರುವ ಕಡ್ಡಿಯಂತಹ ಮನುಷ್ಯನ ಚಿತ್ರಗಳು ಮತ್ತು ಹುಲಿಯ ಚಿತ್ರಗಳಲ್ಲದೆ, ಕೆಲವು ವಿಶಿಷ್ಟ ಚಿಹ್ನೆಗಳಿವೆ. ಹರಪ್ಪಾ ನಾಗರಿಕತೆಯ ಲಿಪಿಮುದ್ರಿಕೆಗಳಲ್ಲಿ ಬಾರಿಬಾರಿಗೂ ಕಾಣಿಸಿಕೊಳ್ಳುವ ತುದಿಗಳಲ್ಲಿ ಆಕಡೆ ಈಕಡೆ ಒಂದೊಂದು ಬಾಹ್ಯ ಅಡ್ಡರೇಖೆಯುಳ್ಳ ರೋಮನ್ ಲಿಪಿಯ 'ಯು' ಮತ್ತು ಅಶೋಕನ ಕಾಲದ ಬ್ರಾಹ್ಮಿಲಿಪಿಯ 'ಮ' ಅಕ್ಷರವನ್ನು ಹೋಲುವ ಎರಡು ಅಕ್ಷರಗಳಂತಿವೆ. 'ಮ' ಅಕ್ಷರದಂತಿರುವ ಚಿಹ್ನೆಯು ಮೂರು ನಾಲ್ಕು ಎಡೆಗಳಲ್ಲಿದೆ. ಈ ಎಲ್ಲ ಚಿಹ್ನೆಗಳು ಚಲ್ಲಾಪಿಲ್ಲಿಯಾಗಿವೆ. ಗಾವಳಿ ಬಯಲು ಬಂಡೆ ಚಿತ್ರದ ಇಂತಹ ಸಂಕೇತದೊಡನೆ ಇರುವ ಗೂಳಿಯ ಚಿತ್ರವನ್ನು ಮೇಲೆ ವರ್ಣಿಸಲಾಗಿದೆ. ಹಿರೆಬೆನಕಲ್ಲಿನ 5ನೇ ವರ್ಣಚಿತ್ರ

ಗವಿಯಲ್ಲಿ ಮುಖವಾಡ ಧರಿಸಿದ ಮನುಷ್ಯನ ಹತ್ತಿರ ಒಂದನ್ನೊಂದು ಛೇದಿಸಿದ ಎರಡು ವ್ಯಾಸಗಳುಳ್ಳ ಒಂದು ವೃತ್ತವಿದೆ. ಇಂತಹ ಚಿಹ್ನೆಯು ಹರಪ್ಪಾ ಲಿಪಿಯ ಅಕ್ಷರಗಳಲ್ಲಿ ಒಂದು. ಹಿರೇಬೆನಕಲ್ಲಿನ 6ನೇ ಗವಿಯಲ್ಲಿ ಮೂರು ಸಮಾನಾಂತರ ಲಂಬ ಸರಳ ರೇಖೆಗಳನ್ನು ಮೂರು ಸಮಾನಾಂತರ ಅಡ್ಡರೇಖೆಗಳು ಛೇದಿಸಿದ ಒಂದು ಚಿತ್ರವಿದೆ. ಈ ರೇಖೆಗಳ ತುದಿಗಳನ್ನು ಏರಿಳಿತದ ಒಂದು ರೇಖೆಯಿಂದ ಸೇರಿಸಿದೆ. ಇದು ಒಂದು ರಂಗೋಲಿ ಚಿತ್ರದಂತಿದೆ. ನವಿಲು ತೀರ್ಥದಲ್ಲಿ (ಸೌಂದತ್ತಿ ತಾಲ್ಲೂಕು ಬೆಳಗಾವಿ ಜಿಲ್ಲೆ) ನೆಟ್ಟಗೆ ನಿಲ್ಲಿಸಿದ ಒಂದು ದಪ್ಪ ಕಲ್ಲುಚಪ್ಪಡಿಯ ಮೇಲೆ ಇತಿಹಾಸ ಕಾಲದ ನಾಗ ಮಂಡಲದಂತಹ ಆಳವಾದ ಗೀರು ರೇಖಾಚಿತ್ರವಿದೆ. ಇದು ಮೊಹೆಂಜೊದಾರೊವಿನ ಒಂದು ಮನೆಯಲ್ಲಿ ದೊರೆತ ತಾಮ್ರದ ತಗಡಿನ ಮೇಲೆ ಒಂದು ಬದಿಯಲ್ಲಿಯ ರೇಖಾ ಚಿತ್ರಕ್ಕೆ ಬಹಳ ಸಮೀಪವಾಗಿದೆ. ಹಂಪೆಯ 1ನೇ ಗವಿಯಲ್ಲಿ ಒಂದು ಬಾಣದ ತ್ರಿಕೋಣಾಕೃತಿಯ ಮೊನೆಯು ಒಂದು ಅಪರೂಪದ ಚಿತ್ರ. ಇದರ ಹಿಡಿಕೆಯ ಕಡೆ ಎರಡು ಮೂಲೆಗಳಲ್ಲಿ ಕೊಕ್ಕೆಗಳಿವೆ. (Antanae dagger).

## ಮಂಡಲ ಚಿತ್ರಗಳು

ಈ ಗವಿವರ್ಣ ಹಾಗೂ ಬಯಲು ಬಂಡೆ ಚಿತ್ರಗಳಲ್ಲಿ ಅಪರೂಪವಾಗಿ ಅಲ್ಲಲ್ಲಿ ಕುತೂಹಲಕಾರಿಯಾದ ಒಗಟಿನ ರೇಖಾಕೃತಿಗಳಿವೆ. ಕೆಲವು ಇತರ ವರ್ಣಚಿತ್ರಗಳೊಂದಿಗೆ ಬಣ್ಣದ ಮತ್ತೆ ಕೆಲವು ಬಂಡೆಯ ಮೇಲೆ ಗೀರು ಚಿತ್ರಗಳು. ನವಿಲುತೀರ್ಥ, ಗಾವಳಿ, ಗುಡ್ನಾಪುರ, ಚಿತ್ರದುರ್ಗಗಳಲ್ಲಿ ಗೀರು ರೇಖಾ ಚಿತ್ರಗಳಿದ್ದರೆ, ಹಿರೇಬೆನಕಲ್ಲ, ಚಿಕ್ಕ ರಾಮಪುರಗಳಲ್ಲಿ ವರ್ಣಚಿತ್ರಗಳಿವೆ. ಇಂಥ ಚಿತ್ರಗಳ ಒಂದು ಪ್ರಕಾರವು ಕರ್ನಾಟಕಕ್ಕೆ ಹೊಂದಿಕೊಂಡಿರುವ ಆಂಧ್ರಪ್ರದೇಶದ ಕೇತವನಮ್ ಒಂದು ಗವಿ ವರ್ಣಚಿತ್ರಗಳಲ್ಲಿ ಇದೆ. ಪರಂಪರಾನುಗತವಾಗಿ ಬಂದ ಶಬ್ದವನ್ನು ಉಪಯೋಗಿಸುವುದಾದರೆ ಇವುಗಳನ್ನು 'ಮಂಡಲ' ಗಳೆಂದು ಕರೆಯಬಹುದು. ಇವುಗಳಲ್ಲಿ ಮೂರು ವಿಧದ ಚಿತ್ರಗಳಿವೆ. ಒಂದನೆಯದು ಆದಿ ಕೊನೆ ಇಲ್ಲದ ಒಂದೇ ರೇಖೆಯ ನಾಲ್ಕುಗಂಟಿನ ಚಿತ್ರ ಅಥವಾ ಎರಡು ರೇಖೆಗಳ ಆರು ಗಂಟಿನ ಚಿತ್ರ. ಎರಡನೆಯದು ಕ್ರಮವಾಗಿ ಪರಸ್ಪರ ಛೇದಿಸುವ ಎರಡು ಸಮಾನ ಚತುರ್ಭುಜಗಳು. ಇವುಗಳಿಗೆ ಗುಣಿಸು ಮೂಲಗಳಿರುತ್ತವೆ. ಮೂರನೆಯದು ಮೂರು ಚುಕ್ಕೆಗಳ ಮೂರು ಸಮಾನಾಂತರ ಸಾಲುಗಳು ಈ ಚುಕ್ಕೆಗಳು ಉದ್ದವಾಗಿಯೂ ಅಡ್ಡವಾಗಿಯೂ ಮತ್ತುಓರೆಯಾಗಿಯೂ ನೇರ ಗೆರೆಗಳಿಂದ ಸೇರಿಸಲ್ಪಟ್ಟಿವೆ. ಎರಡನೆಯದು ಮತ್ತು ಮೂರನೆಯದು ಪರಸ್ಪರ ಭಿನ್ನವಾಗಿದ್ದರೂ ಒಂದೇ ಮೂಲದಿಂದ ಬಂದಿವೆಯೆಂದು ಹೇಳಬಹುದು. ಎರಡನೆಯದರಲ್ಲಿ ಎಂಟು ಮೂಲೆ ಗಂಟುಗಳಿದ್ದರೆ (ಈ ಪ್ರಕಾರದ ಚಿತ್ರದಲ್ಲಿ ಕೇಂದ್ರದಲ್ಲಿ ಒಂದು ಗಂಟು ಆಗುವುದು) ಮೂರನೆಯದರಲ್ಲಿ ಒಂಬತ್ತು ಚುಕ್ಕೆಗಳಿವೆ (ಕೇಂದ್ರದಲ್ಲಿಯೂ ಚುಕ್ಕೆ ಇರುವುದರಿಂದ). ಚುಕ್ಕೆ ಇಲ್ಲವೆ ಗಂಟುಗಳನ್ನು

ಸೇರಿಸುವುದರಲ್ಲಿ ಮಾತ್ರ ವ್ಯತ್ಯಾಸ. ಈ ವ್ಯತ್ಯಾಸದಿಂದ ಭಿನ್ನ ಆಕೃತಿಗಳು ಉಂಟಾಗಿವೆ. ಈಗ ಮೊದಲನೆಯದರ ಬಗ್ಗೆ ವಿಚಾರ ಮಾಡೋಣ.

ನವಿಲು ತೀರ್ಥದಲ್ಲಿಯ ಎರಡು ರೇಖೆಗಳ ಆರು ಗಂಟಿನ ಮಂಡಲವನ್ನು ವಿವೇಚಿಸುವ. ಈ ಪ್ರಕಾರದ ಚಿತ್ರಕ್ಕೆ ಮೊಹೆಂಜೋದಾರೊವಿನ ಹರಪ್ಪಾ ನಾಗರಿಕತೆಯ (ಸು. ಕ್ರಿ.ಪೂ. 2500–1750) ಒಂದು ಬದಿಯಲ್ಲಿ ಒಂದು ಸಾಲು ಹರಪ್ಪಾ ಲಿಪಿಯ ಬರವಣಿಗೆಯುಳ್ಳ ನಾಣ್ಯದಂತಿರುವ ಒಂದು ತಾಮ್ರದ ತಗಡಿನ ಮತ್ತೊಂದು ಬದಿಯಲ್ಲಿ ಇಂಥ ಒಂದೇ ರೇಖೆಯ ನಾಲ್ಕು ಗಂಟಿನ ಮಂಡಲವು ಮೂಲವಾಗಿರುವ ಸಾಧ್ಯತೆ ಇದೆ ಎಂಬುದನ್ನು ನಾನು ಬೇರೆಡೆಯಲ್ಲಿ ಚರ್ಚಿಸಿದ್ದೇನೆ. 1991ರಿಂದೀಚಿನ ನನ್ನ ಅನ್ವೇಷಣೆಗಳಲ್ಲಿ ಸುಪ್ರಸಿದ್ಧ ಆದಿ ಕದಂಬರ ರಾಜಧಾನಿ ಬನವಾಸಿಯ ಸಮೀಪ ಗುಡ್ಡಾಪುರ (ಸಿರ್ಸಿ ತಾಲ್ಲೂಕು ಉತ್ತರ ಕನ್ನಡ ಜಿಲ್ಲೆ)ದಲ್ಲಿಯೂ, ಇತ್ತೀಚೆಗೆ ಹೊಳಲೂರು (ಶಿವಮೊಗ್ಗ ತಾಲ್ಲೂಕು ಮತ್ತು ಜಿಲ್ಲೆ) ಮತ್ತು ಕೆಳದಿ ರಾಜ್ಯದ ಮೂರನೆಯ ಮತ್ತು ಕೊನೆಯ ರಾಜಧಾನಿಯಾದ ಹಳೆನಗರದಲ್ಲಿ ಈ ವಂಶದ ಒಬ್ಬ ಅರಸನಿಂದ ಕಟ್ಟಿಸಲ್ಪಟ್ಟ ಒಂದು ದೇವಾಲಯದಲ್ಲಿ ಇದ್ದುದ್ದು ನಾಲ್ಕು ಗಂಟಿನ ನನ್ನ ಕುತೂಹಲವನ್ನು ಮತ್ತಷ್ಟು ಕೆರಳಿಸಿದೆ.

ಗುಡ್ಡಾಪುರ–ಹೊಳಲೂರು–ಹಳೆನಗರದಲ್ಲಿಯ ಚಿತ್ರಗಳು ಸು. 17ನೆಯ ಶತಮಾನದವು. ಕೇತವನಮ್‌ದಲ್ಲಿಯೂ ಇಂಥ ಮಂಡಲದ ವರ್ಣ ಚಿತ್ರವು ಬಹುಮಟ್ಟಿಗೆ ಶಿಲಾ–ತಾಮ್ರ–ಯುಗದ ಕೊನೆಯ ಹಂತ(ಕ್ರಿ.ಪೂ. 1500–1000) ಅಥವಾ ಬೃಹತ್ ಶಿಲಾಸಂಸ್ಕೃತಿಯ ಆದಿ ಹಂತದ (ಕ್ರಿ.ಪೂ. 1200–600) ಕಾಲದಿದ್ದಿರಬಹುದು. ಉತ್ತರ ಕರ್ನಾಟಕ ಮತ್ತು ಮಲನಾಡಿನಲ್ಲಿ ಇಂದಿಗೂ ಇಂಥ ಮಂಡಲವನ್ನು ರಂಗೋಲಿಯಲ್ಲಿ ಹಾಕುತ್ತಾರೆಂದು ಈ ಚಿತ್ರಗಳನ್ನು ನೋಡಿದ ನನ್ನ ಸ್ನೇಹಿತರೊಬ್ಬರು ಹೇಳಿದರು. ಒಟ್ಟಿನಲ್ಲಿ ಈ ಮಂಡಲವು ಪ್ರಬುದ್ಧ ಹರಪ್ಪಾ ಸಂಸ್ಕೃತಿಯಿಂದ ಇಂದಿನವರೆಗೂ ನಿರಂತರವಾಗಿ ನಮ್ಮ ಪರಂಪರೆಯಲ್ಲಿ ಉಳಿದು ಬಂದಿದೆ ಎಂಬುವುದು ಗಮನಾರ್ಹ.

ಗುಡ್ಡಾಪುರದ ಚಿತ್ರಕಲ್ಲನ್ನು ಸ್ಥಳೀಯ ಜನರು ಅಲ್ಲಿದ್ದ ಸೋದೆ ಅರಸರ ಕಾಲದ ವೀರಶೈವ ಮಠದ ಗಡಿಕಲ್ಲೆಂದು ಹೇಳುತ್ತಾರೆ. ವೀರಶೈವ ಮಠ ಇದ್ದಿತೆಂದು ಹೇಳಲಾದ ಸ್ಥಳವು ಈಗ ಒಂದು ಬಯಲು ಪ್ರದೇಶ. ಅಲ್ಲಿ ಯಾವುದೇ ರೀತಿಯ ಕಟ್ಟಡವಿದ್ದ ಕುರುಹುಗಳು ಮೇಲಿನ ನೋಟಕ್ಕೆ ಸಿಗಲಿಲ್ಲ. ಕಲ್ಲಿನ ಮೇಲೆ ಈ ಮಂಡಲ ಚಿತ್ರದ ಜೊತೆಗೆ ಬೇರೆ ಬೇರೆ ವಿವಿಧ ರೇಖಾ ಚಿತ್ರಗಳಿವೆ. ಮಂಡಲದ ಬಲಬದಿಗೆ ಶಂಖವು, ಎಡಬದಿಗೆ ಚಕ್ರವೂ ಇದೆ. ಚಕ್ರದ ಎಡಬದಿಯಲ್ಲಿ ನಕ್ಷತ್ರದ ಸಂಕೇತವಿದೆ. ಮೇಲ್ಭಾಗದಲ್ಲಿ ಒಂಬತ್ತು ಚುಕ್ಕಿಗಳ ರೇಖಾಚಿತ್ರವಿದ್ದು, ಇದರ ಮೇಲು ಭಾಗದ ಎರಡೂ ಬದಿಗಳಲ್ಲಿ ವಜ್ರ ರೇಖಾಚಿತ್ರಗಳಿವೆ. ವಜ್ರವೆಂದರೆ ಒಂದು ಪ್ರಕಾರದ ಆಯುಧ. ಕೈಯಿಂದ ಹಿಡಿಯಲು ಅನುಕೂಲವಾಗುವಂತಿರುವ ಲೋಹ ಸಳಿಯ ಎರಡು ತುದಿಗಳಲ್ಲಿ

ಒಂದೊಂದು ತ್ರಿಶೂಲವಿರುತ್ತದೆ. ಈ ಪ್ರಕಾರದ ಆಯುಧವು ಕಾರ್ತಿಕೇಯ ದೇವರ ಮೂರ್ತಿಯ ಒಂದು ಕೈಯಲ್ಲಿ ತೋರಿಸಿರುತ್ತದೆ. ಇವೆಲ್ಲ ಚಿಹ್ನೆಗಳ ಜೊತೆಗೆ ಇರುವುದರಿಂದ ನಾಲ್ಕು ಗಂಟಿನ ಮಂಡಲವು ಸ್ವಲ್ಪ ಹೆಚ್ಚು ಅರ್ಥಗರ್ಭಿತವಾಗಿದೆ. ವಿಜಯನಗರ ಕಾಲದ ವೈಷ್ಣವ ದೇವಾಲಯಗಳಲ್ಲಿಯ ದ್ವಾರಬಂಧದ ಲಲಾಟ ಬಿಂಬದಲ್ಲಿ ಮತ್ತು ಆ ಕಾಲದ ಇಂಥ ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳ ಮೇಲ್ಭಾಗಗಳಲ್ಲಿ ಒಂದೇ ಸಾಲಿನಲ್ಲಿ ಶಂಖ, ತಿರು (ತಮಿಳು ಶಬ್ದ. ಪವಿತ್ರ ಎಂದು ಅರ್ಥ) ನಾಮ ಮತ್ತು ಚಕ್ರವಿರುತ್ತವೆ. ಆದ್ದರಿಂದ ಇಂಥ ಪಟ್ಟಿಕೆ ವೆಂಕಟೇಶ್ವರ ಅಂದರೆ ವಿಷ್ಣುದೇವನನ್ನು ಸಂಕೇತಿಸುತ್ತದೆ. ಇದರಂತೆಯೇ ಗುಡ್ಣಾಪುರದಲ್ಲಿ ಶಂಖ–ಚಕ್ರಗಳ ನಡುವೆ ಮಂಡಲವಿರುವುದರಿಂದ ಅದು ಬಹುಮಟ್ಟಿಗೆ ತಿರುನಾಮ ಸಮಾನವೆಂದು ತಿಳಿಯಬಹುದು.

ಈ ರೀತಿ ವೈಷ್ಣವ ದೇವಾಲಯಗಳಲ್ಲಿ ಪಟ್ಟಿಕೆಯನ್ನು ತೋರಿಸುವ ಪದ್ಧತಿಯು ಉತ್ತರ ಕನ್ನಡ ಜಿಲ್ಲೆಯಲ್ಲಿ ಸೋದೆ ಅರಸರ ಕಾಲದಲ್ಲಿ ಬಳಕೆಗೆ ಬಂದಿರಬೇಕು. ಅವರು ವಿಜಯನಗರ ಸಾಮ್ರಾಜ್ಯ ಪತನವಾಗುವವರೆಗೆ ಅದಕ್ಕೆ ಅಧೀನರಾಗಿದ್ದರು ಮತ್ತು ಆ ಕಾಲದಲ್ಲಿ ಇವರ ಆಶ್ರಯದಲ್ಲಿ ಕಟ್ಟಿಸಿದ ದೇವಾಲಯಗಳಲ್ಲಿ ವಿಜಯನಗರ ವಾಸ್ತುಶಿಲ್ಪ ಕಲೆಯ ಪ್ರಭಾವವಿದೆ. ಹೊಳಲೂರಿನಲ್ಲಿ ಕೆಳದಿ ಅರಸರ ಕಾಲದ ಒಂದು ಈಶ್ವರ ದೇವಾಲಯದ (ಸು. 17ನೇ ಶತಮಾನ) ಮುಂದೆ ಬಿಡಿ ಬಿಡಿಯಾಗಿ ನೆಡಲ್ಪಟ್ಟ ಎರಡು ಕಲ್ಲು ಹಲಗೆಗಳ ಮೇಲೆ ಇಂಥ ಒಂದೊಂದು ಮಂಡಲ ಚಿತ್ರವಿದೆ. ಹಳೆನಗರದ ಇದೇ ಅರಸರ ಕಾಲದ ದೇವಾಲಯದ ಮುಂಭಾಗದ ಛತ್ತಿನ ಒಳಮೈಯಲ್ಲಿ ಎರಡು ಪದ್ಮಗಳ ನಡುವೆ ಇಂಥ ಮಂಡಲ ಚಿತ್ರವಿದ್ದ ಶುಭಸಂಕೇತದ ಪಟ್ಟಿಕೆ ಇದೆ. ಇತ್ತೀಚೆಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಲಕ್ಷ್ಮಣ ತೆಲಗಾವಿಯವರು ಚಿತ್ರದುರ್ಗದ ಚಂದ್ರವಳ್ಳಿ ಪ್ರದೇಶದಲ್ಲಿ ಎಡೆಬಿಡದ ಅನ್ವೇಷಣ ಕಾರ್ಯ ಕೈಗೊಂಡು ಇನ್ನೂ ಹಲವಾರು ಗೀರು ಚಿತ್ರಗಳನ್ನು, ವರ್ಣಚಿತ್ರಗಳನ್ನೂ ಶೋಧಿಸಿದ್ದಾರೆ. ಇವರು ಶೋಧಿಸಿದ ಚಿತ್ರಗಳಲ್ಲಿ ನಾಲ್ಕುಗಂಟಿನ ರೇಖಾ ಚಿತ್ರವೂ ಇದೆ. ಇದು ಒಂದು ವಿಶಾಲವಾದ ಬಂಡೆಯ ಮೇಲೆ ಇದರ ಒಂದು ಬದಿಯಲ್ಲಿ ವೃತ್ತಾಕಾರದ ತಗ್ಗು ಮತ್ತು ಅದರಿಂದ ನೀರು ಹರಿದು ಬರಲು ಪ್ರನಾಲ ಇದ್ದು ಮಂಡಲದ ಮತ್ತೊಂದು ಬದಿಯಲ್ಲಿ ಮುಂದೆ ನಡೆದು ಹೋದಂತೆ ಭಾಸವಾಗುವ ಮನುಷ್ಯನ 10 ಹೆಜ್ಜೆ ಗುರುತುಗಳಿವೆ. ಆದ್ದರಿಂದ ಇಲ್ಲಿಯೂ ಕೂಡಾ ಈ ಚಿತ್ರವು ಒಂದು ಧಾರ್ಮಿಕ ಅರ್ಥವುಳ್ಳದ್ದಾಗದೆ. ಆದರೆ ಈ ಮಂಡಲದಲ್ಲಿ ಒಂದು ವೈಶಿಷ್ಟ್ಯವುಂಟು. ಮೇಲ್ಭಾಗದಲ್ಲಿಯ ಕಮಾನಿನ ರೇಖೆಯ ಮಧ್ಯದಲ್ಲಿ ಸ್ವಲ್ಪ ಸ್ಥಳ ಬಿಟ್ಟುದರಿಂದ ಎರಡು ತುದಿಗಳುಂಟಾಗಿ ಆ ತುದಿಗಳು ಸಣ್ಣ ವೃತ್ತದಂತೆ ಅಗಲವಾಗಿವೆ. ಆದ್ದರಿಂದ ಥಕ್ಕನೆ ನೋಡಿದಲ್ಲಿ ಹೆಣೆದುಕೊಂಡ ಜೋಡಿ ನಾಗದಂತಿದೆ. ಆದ್ದರಿಂದ ಇದು ಜೋಡಿ ನಾಗರದ ಸಂಕೇತವಾಗಿದ್ದು, ನಾಗಮಂಡಲವಾಗಿರಬಹುದೆ ಎಂಬ ಸಂಶಯವೂ ಮೂಡುತ್ತದೆ.

ಉತ್ತರ ಕರ್ನಾಟಕ ಮತ್ತು ಮಲೆನಾಡ ಪ್ರದೇಶದಲ್ಲಿ ಜನರು ಅಲ್ಲಲ್ಲಿ ಇಂದಿಗೂ ದೇವರ ಮಂಟಪದ ಮುಂದೆ, ಮನೆಯ ಮುಂದೆ ಇಂಥ ಮಂಡಲದ ರಂಗೋಲಿ ಹಾಕುವುದು ಉಂಟು ಎಂದು ನನ್ನ ಕೆಲವು ಸ್ನೇಹಿತರು ಹೇಳಿದ್ದಾರೆ. ಉತ್ತರ ಕರ್ನಾಟಕದಲ್ಲಿ ಇಂಥ ಮಂಡಲಗಳು ಶಿಶುಗಳಾದ ಬಲರಾಮ ಮತ್ತು ಕೃಷ್ಣರನ್ನು ತೊಟ್ಟಿಲಿಗೆ ಹಾಕಿದ ಸಂಕೇತವೆಂದೂ, ಮಲೆನಾಡಿನಲ್ಲಿ ಇದು ವಿಷ್ಣುವಿನ ಪಾದವೆಂದು ನಂಬುವ ವಿಷಯವನ್ನು ಹೇಳಿದರು. ನಮ್ಮ ಪರಂಪರೆಯಲ್ಲಿ ಶಿವ–ನಾಗ ವಿಷ್ಣು–ನಾಗ ಇವರ ಸಂಬಂಧ ನಿಕಟ.

ಇವೆಲ್ಲವನ್ನೂ ಪರಿಶೀಲಿಸಿದಾಗ ಈ ಮಂಡಲ ಚಿತ್ರಕ್ಕೆ ಒಂದು ಧಾರ್ಮಿಕ ಅರ್ಥ ಮತ್ತು ಮಹತ್ವವಿದ್ದು ಶೈವ–ವೈಷ್ಣವ–ನಾಗ ಸಂಪ್ರದಾಯಕ್ಕೆ ಸಂಬಂಧಿಸಿರಬಹುದು. ಈ ಅರ್ಥ ಮತ್ತು ಮಹತ್ವ ಈ ಮಂಡಲಕ್ಕೆ ಯಾವ ಕಾಲದಿಂದ ಬಂದಿರಬಹುದು? ಹರಪ್ಪಾ ಸಂಸ್ಕೃತಿಯ ಮಂಡಲಕ್ಕೂ ಸ್ವಲ್ಪ ಹೆಚ್ಚು ಕಡಿಮೆ ಇದೇ ಅರ್ಥವು ಇದ್ದಿರಬಹುದೇ ಎಂಬ ಪ್ರಶ್ನೆಗಳನ್ನು ಇನ್ನೂ ಹೆಚ್ಚಿನ ಸಂಶೋಧನೆಯಿಂದ ಬಿಡಿಸಬೇಕಾಗಿದೆ ಮತ್ತು ರಂಗೋಲಿಯಲ್ಲಿ ಇಂಥ ಮಂಡಲ ಚಿತ್ರಕ್ಕೆ ಮೇಲೆ ಹೇಳಿದ ಅರ್ಥಗಳು ಪ್ರಚಲಿತವಿದೆಯೋ ಎಂಬುದನ್ನು ಪರಿಶೀಲಿಸಬೇಕಾಗಿದೆ.

ದ್ವಿಚತುರ್ಬಾಹು ಚಿತ್ರಕ್ಕೆ ಮಾತ್ರ ಖಂಡಿತವಾಗಿಯೂ ಧಾರ್ಮಿಕ ಅರ್ಥವಿದೆ. ಗೃಹಪ್ರವೇಶ ಮುಂತಾದ ಕೆಲವು ವಿಶಿಷ್ಟಧಾರ್ಮಿಕ ಕಾರ್ಯಗಳಲ್ಲಿ ವೈದಿಕ ಪುರೋಹಿತರು ಇಂಥ ಮಂಡಲಗಳನ್ನು ರಂಗೋಲಿಯಲ್ಲಿ ಹಾಕಿ ಅವುಗಳಿಗೆ ಇಂಥ ಕಾರ್ಯಗಳನ್ನು ಕೈಗೊಂಡ ಯಜಮಾನನಿಂದ ಪೂಜೆ ಮಾಡಿಸುತ್ತಾರೆ. ಈ ಮಂಡಲದಲ್ಲಿರುವ ಒಂಭತ್ತು ಗಂಟುಗಳು ನವಗ್ರಹಗಳನ್ನು ಸೂಚಿಸುತ್ತವೆ. ಗಾವಳಿಯ ಒಂದು ಕೋಣದ ರೇಖಾ ಚಿತ್ರಕ್ಕೆ ಸೇರಿದಂತೆ ಇಂಥ ಮಂಡಲದ ಚಿತ್ರವಿದೆ. ಕೋಣವು ಯಮದೇವತೆಯ ವಾಹನ. ಆದ್ದರಿಂದ ಗಾವಳಿ ಚಿತ್ರದ ಕಾಲದಲ್ಲೂ ಇಂಥ ಮಂಡಲವು ನವಗ್ರಹಗಳನ್ನು ಸಂಕೇತಿಸುತ್ತಿತ್ತೆ ಎಂಬ ಪ್ರಶ್ನೆ ಏಳುತ್ತದೆ. ಏಕೆಂದರೆ ಈ ಚಿತ್ರವಿರುವ ಪರಿಸರದಲ್ಲಿಯೇ ಬೃಹತ್ ಶಿಲಾಸಂಸ್ಕೃತಿಯ ಕಲ್ಗೋರಿಗಳ ನೆಲೆಯೂ ಇದೆ.

ಒಂಭತ್ತು ಚುಕ್ಕೆಗಳ ಮಂಡಲವೂ ಕೂಡಾ ಗುಡ್ಡಾಪುರದ ಕಲ್ಲಿನ ಮೇಲೆ ಇತರ ಧಾರ್ಮಿಕ ಸಂಕೇತಗಳೊಡನೆ ಮತ್ತು ಇದರ ಎರಡೂ ಬದಿಗಳಲ್ಲಿ ವಜ್ರಾಯುಧ ರೇಖಾ ಚಿತ್ರಗಳಿರುವುದರಿಂದ ಇದಕ್ಕೂ ಒಂದು ಧಾರ್ಮಿಕ ಅರ್ಥವಿದೆ ಎಂಬುವುದು ಸ್ಪಷ್ಟವಾಗುತ್ತದೆ.

ಚಿಕ್ಕರಾಮಪುರದ ಮೊದಲನೆ ಗವಿಯಲ್ಲಿ ಗೂಳಿ, ಜಿಂಕೆ, ನವಿಲು, ಈಟಿಯನ್ನು ಅಡ್ಡಲಾಗಿ ಹಿಡಿದ ಮನುಷ್ಯ ಮೊದಲಾದ ಚಿತ್ರಗಳೊಂದಿಗೆ ಎರಡು ಚತುರ್ಬಾಹು ಮಂಡಲಗಳು, ಒಂದು ಒಂಭತ್ತು ಚುಕ್ಕೆಗಳ ಮಂಡಲವು ಇವೆ. ಅದರಂತೆಯೇ ಹಿರಿ ಬೆನಕಲ್ಲಿನ ನಾಲ್ಕನೆಯ ಗುಹೆಯಲ್ಲಿ ಇಂಥ ಪ್ರಾಣಿ ಮನುಷ್ಯರ ಚಿತ್ರಗಳೊಂದಿಗೆ ಒಂಭತ್ತು ಚುಕ್ಕೆಯ ಚಿತ್ರವಿದೆ. ಇದರಲ್ಲಿಯ ರೇಖೆಗಳ

ತುದಿಗಳನ್ನು ಸೇರಿಸುವ ತೋರಣ ಹಾಕಿದಂತೆ ಸುತ್ತಲೂ ಒಂದು ರೇಖೆಯಿದೆ. ಚಿಕ್ಕರಾಮಪುರದ ದ್ವಿಚತುರ್ಬಾಹು ಮಂಡಲದಲ್ಲಿ ಮಧ್ಯದಲ್ಲಿ ಎರಡು ಕಂಸಗಳು ವಿರುದ್ಧ ದಿಕ್ಕಿನಲ್ಲಿ ಪರಸ್ಪರ ಛೇಧಿಸಿದ ರೇಖಾ ಚಿತ್ರಗಳಿವೆ. ಇದು ಬಹುಶಃ ಕೇಂದ್ರ ದೇವತೆಯ ಪ್ರಚಲಿತ ಹೆಸರಿನ ಸಂಕೇತವಿರಬಹುದೆ?

ಇನ್ನೆರಡು ಬೇರೆ ಪ್ರಕಾರದ ಸರಳ ವರ್ಣಚಿತ್ರ ರೇಖಾ ಸಂಕೇತಗಳು ಹಿರೆಬೆನಕಲ್ಲಿನ ಸುಮಾರು 10 ಕಿ.ಮೀ. ಪಶ್ಚಿಮಕ್ಕೆ ಬಿಳೆಭಾವಿಯಲ್ಲಿವೆ. ಒಂದು ಗುಣಾಕಾರದ ಚಿಹ್ನೆಯಾಗಿದ್ದು, ಎರಡೂ ಬದಿಯ ರೇಖೆಗಳ ತುದಿಗಳನ್ನು ಬಾಗಿದ ರೇಖೆಗಳಿಂದ ಕೂಡಿಸಲ್ಪಟ್ಟಿವೆ. ಬಹುಮಟ್ಟಿಗೆ ಹರಪ್ಪಾ ಲಿಪಿಯ ಒಂದು ಅಕ್ಷರಕ್ಕೆ ಇದು ಸಮೀಪವಾಗಿದೆ. ಹರಪ್ಪಾ ಲಿಪಿಯಲ್ಲಿ ಇಂಥ ಚಿಹ್ನೆಯಲ್ಲಿ ಒಂದು ಬದಿಯ ಎರಡು ತುದಿಗಳು ಒಳಬಾಗಿರುತ್ತವೆ. ಕೂಡಿರುವುದಿಲ್ಲ. ಇದನ್ನು ಡಾ. ಎಸ್.ಆರ್. ರಾವ್ ಅವರು 'ಮ' ಎಂದು ಗುರುತಿಸಿದ್ದಾರೆ. ಮತ್ತೊಂದು ಒಂದೇ ಕೇಂದ್ರದ ಮೂರು ವೃತ್ತಗಳು ಹೊರಬದಿಯ ರೇಖೆಗೆ ಬೆಳಕಿನ ಕಿರಣಗಳಂತೆ ಸಣ್ಣ ಸಣ್ಣ ಅಡ್ಡರೇಖೆಗಳು ಸುತ್ತಲೂ ಇವೆ. ಪ್ರಾಯಶಃ ಇದು ಸೂರ್ಯ ಮಂಡಲವನ್ನು ಹೆಚ್ಚು ನೈಜವಾಗಿ ಪ್ರತಿನಿಧಿಸಬಹುದು. ಈ ಪ್ರಕಾರದ ಮಂಡಲವೂ ಕೂಡಾ ಮೊಹೆಂಜೋದಾರೊದಲ್ಲಿ ದೊರೆತ ಹರಪ್ಪಾ ನಾಗರಿಕತೆಯ ತಾಮ್ರದ ಪಟ್ಟಿಕೆಗಳಲ್ಲಿ ಇರುವುದು ತುಂಬಾ ಸ್ವಾರಸ್ಯಕರ.

ಮಂಡಲ ವರ್ಣಚಿತ್ರಗಳೆಲ್ಲವೂ ಬಹುಮಟ್ಟಿಗೆ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರಿಗೆ ಸೇರಿದವು. ಹಿರೆಬೆನಕಲ್ಲಿನಲ್ಲಿ ಇಂಥ ಗವಿ ವರ್ಣಚಿತ್ರದ ಸಮೀಪದಲ್ಲಿಯ ಈ ಸಂಸ್ಕೃತಿಯ ಜನವಾಸ್ತವ್ಯದ ನೆಲೆಯು ಮತ್ತು ನಾನೂರಕ್ಕೂ ಹೆಚ್ಚು ನಾಲ್ಕು ಪ್ರಕಾರದ ಕಲ್ಗೋರಿಗಳಿವೆ. ಹತ್ತಕ್ಕೂ ಹೆಚ್ಚು ಈ ಪ್ರದೇಶದಲ್ಲಿ ಗವಿ ವರ್ಣ ಚಿತ್ರಗಳೂ ಶೋಧವಾಗಿದೆ. ಚಿಕ್ಕರಾಮಪುರವು ವ್ಯಾಪಕವಾದ ಈ ನೆಲೆಗಳ ಪರಿಸರದಲ್ಲಿಯೇ ಇದೆ.

ಒಟ್ಟಿನಲ್ಲಿ ಈ ಮಂಡಲಗಳ ಧಾರ್ಮಿಕ ಅರ್ಥವನ್ನು ಸಂದರ್ಭವನ್ನು ಕ್ರಮೇಣ ಬಿಡಿಸಲು ಸಾಧ್ಯವಾಗಬಹುದೆಂಬ ಸೂಚನೆಗಳಿವೆ. ಇವುಗಳ ಧಾರ್ಮಿಕ ಒಗಟುಗಳನ್ನು ಬಿಡಿಸಲು ಸಾಧ್ಯವಾದರೆ ಮತ್ತು ಇವುಗಳಿಗೂ ಹರಪ್ಪಾ ಸಂಸ್ಕೃತಿಯ ಚಿಹ್ನೆಗಳಿಗೂ ಸಂಬಂಧವನ್ನು ಖಚಿತಪಡಿಸುವುದಾದರೆ, ಕರ್ನಾಟಕದಲ್ಲಿಯ ಇತಿಹಾಸ ಅಂದರೆ ಮೌರ್ಯ–ಶಾತವಾಹನ ಕಾಲಕ್ಕಿಂತಲೂ ಪೂರ್ವದ ಜನರ ಧಾರ್ಮಿಕ ವಿಚಾರವು ತತ್ಸಂಬಂಧ ಈ ವರ್ಣಚಿತ್ರಗಳ ಸ್ವಲ್ಪಮಟ್ಟಿನ ಅಥವಾ ಹಾಗೂ ಹರಪ್ಪಾ ಸಂಸ್ಕೃತಿಯ ಕೆಲವು ಧಾರ್ಮಿಕ ವಿಚಾರಗಳು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿ ಇವೆಲ್ಲ ಸಂಸ್ಕೃತಿಗಳ ಅಧ್ಯಯನಗಳಲ್ಲಿ ಒಂದು ಹೊಸ ಅಧ್ಯಾಯವನ್ನೇ ಬರೆಯಲು ಸಾಧ್ಯವಾಗಬಹುದು. ❑

# 7. ಹೋಲಿಕೆ ಮತ್ತು ಕಾಲಮಾನ

ಮೇಲೆ ಸೂಚಿಸಿದ ವರ್ಣಚಿತ್ರ ಗವಿಗಳಲ್ಲಿ ಮತ್ತು ಬಯಲು ಬಂಡೆಯ ಚಿತ್ರಗಳ ಜೊತೆಗೆ ಕೆಲವೆಡೆಗಳಲ್ಲಿ ಇತಿಹಾಸ ಹಾಗೂ ಆಧುನಿಕ ಕಾಲದ ಚಿತ್ರಗಳೂ ಇವೆ. ಹೆಚ್ಚಾಗಿ ಬಯಲು ಬಂಡೆ ಚಿತ್ರಗಳುಳ್ಳ ನೆಲೆಗಳಲ್ಲಿ ಈ ರೀತಿಯಿದೆ. ಏಕೆಂದರೆ, ಪ್ರಾಚೀನ ಕಾಲದ ಚಿತ್ರಗಳು ಸುಲಭವಾಗಿ ಕಣ್ಣಿಗೆ ಬಿದ್ದಾಗ ದನಕಾಯುವ ಹುಡುಗರು, ಕುರುಬರು ಕುತೂಹಲದಿಂದಲೂ ಸಮಯ ಸ್ಫೂರ್ತಿಯಿಂದಲೂ ಪಕ್ಕದ ಮತ್ತೊಂದು ಬಂಡೆಯ ಮೇಲೆ ತಮಗೆ ತೋಚಿದ (ಹನುಮಪ್ಪ, ರೈಲುಬಂಡಿ, ಹುಲಿ, ಗುಡಿ ಮೊದಲಾದ) ಚಿತ್ರಗಳನ್ನು ಬಿಡಿಸಿರಬೇಕು. ಇಂತಹ ಚಿತ್ರಗಳನ್ನು ಬಿಡಿಸುವ ಕ್ರಮ ಸುಲಭ. ಅನುಕೂಲಕರವಾದ ಒಂದು ಗಟ್ಟಿಕಲ್ಲನ್ನು ತೆಗೆದುಕೊಂಡು ಬಂಡೆಯ ಮೇಲೆ ಕುಟ್ಟಿ ಬೇಕಾದ ಚಿತ್ರವನ್ನು ತೆಗೆಯಬಹುದು. ಆದರೆ ವರ್ಣಚಿತ್ರ ಗವಿಗಳು ಇಷ್ಟು ಸುಲಭವಾದ ಸ್ಥಳಗಳಲ್ಲಿಲ್ಲ. ಮೇಲಾಗಿ ಇದಕ್ಕೆ ಬೇಕಾದ ಬಣ್ಣದ ಗಟ್ಟಿಗಳನ್ನು ಹುಡುಕಿ ಬಣ್ಣ ಮಾಡಿಕೊಳ್ಳಬೇಕು. ಕುಂಚವನ್ನು ತಯಾರಿಸಬೇಕು, ಬಣ್ಣದಲ್ಲಿ ಪದೇ ಪದೇ ಅದ್ದಿ ಬರೆಯಬೇಕು. ಅಂದರೆ ಬಯಲು ಬಂಡೆ ಚಿತ್ರಗಳನ್ನು ಕಲ್ಪಿಸಿಕೊಂಡ ಕೂಡಲೇ ಬಿಡಿಸಲು ಸಾಧ್ಯವಾದಷ್ಟು ಸುಲಭವಲ್ಲ. ಇದರಲ್ಲಿ ಸಿದ್ಧತೆ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕಾಗುತ್ತದೆ. ಮತ್ತು ಸಾಮಾನ್ಯವಾಗಿ ಗವಿ ಆಯಾ ಕಾಲದ ಚಿತ್ರಗಳಿಂದಲೆ ತುಂಬಿರುತ್ತದೆ. ಇದನ್ನು ನೋಡಿ ಉದ್ರೇಕಿತನಾದ ಮತ್ತೋರ್ವನು ತಾನೂ ಹಾಗೆ ಬರೆಯಬೇಕೆಂದರೆ ಅವನು ಮತ್ತೊಂದು ಗವಿಯನ್ನು ಹುಡುಕಬೇಕಾಗುತ್ತದೆ. ಇಷ್ಟು ಮಾಡಿಕೊಳ್ಳಬೇಕಾದರೆ ಅದಕ್ಕೆ ತಾಳ್ಮೆಯೊಡನೆ ತೀವ್ರ ಆಸಕ್ತಿಯೂ ಇರಬೇಕಾಗುತ್ತದೆ. ಆದ್ದರಿಂದ ಒಂದು ಗವಿಯ ಪ್ರಾಗೈತಿಹಾಸಿಕ ಚಿತ್ರಗಳೊಡನೆ ಆಧುನಿಕ ಕಾಲದ ಚಿತ್ರಗಳಿರುವುದು ಅಪರೂಪ.

ಮೇಲೆ ಸೂಚಿಸಿದಂತೆ, ಗವಿವರ್ಣ ಮತ್ತು ಬಯಲುಬಂಡೆ ಚಿತ್ರಗಳನ್ನು ಕಾಲದುದ್ದಕ್ಕೂ ಬೇರೆ ಬೇರೆ ಜನಾಂಗದವರು ಸೃಷ್ಟಿಸಿದ್ದಾರೆ. ಒಂದೇ ಸ್ಥಳದಲ್ಲಿಯ ಚಿತ್ರಗಳೂ ಬೇರೆ ಬೇರೆ ಕಾಲದವೂ ಆಗಿವೆ. ಬಹಳಷ್ಟು ಚಿತ್ರಗಳ ಕಾಲಮಾನವನ್ನು ನಿರ್ಧರಿಸುವುದು ಈ ಚಿತ್ರಗಳ ಅಧ್ಯಯನಕ್ಕೆ ಸಂಬಂಧಿಸಿದ ಕ್ಲಿಷ್ಟ ಸಮಸ್ಯೆಗಳಲ್ಲಿ ಒಂದು. ಆದರೂ ಅವುಗಳ ನೆಲೆ, ಸ್ಥಿತಿ, ಚಿತ್ರಗಳ ವಸ್ತು, ನಿರೂಪಣಾ ಶೈಲಿ, ತಾಂತ್ರಿಕತೆ, ಸಮೀಪದ ಸಾಂಸ್ಕೃತಿಕ ನಿವೇಶನಗಳೊಡನೆ ಇದ್ದಿರಬಹುದಾದ

ಸಂಬಂಧ, ಇತರೆಡೆಗಳಲ್ಲಿಯ ನಿರ್ದಿಷ್ಟ ಕಾಲಮಾನದ ವಸ್ತುಗಳೊಡನೆ ಹೋಲಿಕೆ–ಇವೇ ಮೊದಲಾದ ಅಧ್ಯಯನದಿಂದ ಸ್ಥೂಲವಾಗಿ ಇವುಗಳ ಕಾಲಮಾನವನ್ನು ತಕ್ಕಮಟಿಗೆ ಸೂಚಿಸಬಹುದು.

ಬಾದಾಮಿ–ಪಟದಕಲ್ಲು ಭಾಗದಲ್ಲಿಯ ಅರೆಗುಡ್ಡ–ಹಿರೇಗುಡ್ಡಗಳಲ್ಲಿಯ ಹಾಗೂ ಬಾದಾಮಿ ಸಮೀಪದ ಒಂದು ಗವಿಯ ಮತ್ತು ರಾಮದುರ್ಗ (ಬೆಳಗಾವಿ ಜಿಲ್ಲೆ) ಹತ್ತಿರದ ಕಲ್ಲಾಸರೆಯಲ್ಲಿಯ ವರ್ಣಚಿತ್ರಗಳು ಉತ್ತರ ಕರ್ನಾಟಕದಲ್ಲಿಯೇ ಅಲ್ಲ ಇದುವರೆಗೆ ತಿಳಿದ ಮಟ್ಟಿಗೆ ದಕ್ಷಿಣ ಭಾರತದಲ್ಲೆ ಶೈಲಿಯಲ್ಲಿ ಹಾಗೂ ಚಿತ್ರಗಳ ವಸ್ತುವಿನಲ್ಲಿ ವಿಶಿಷ್ಟವಾಗಿವೆ. ಭೀಂಬೆಟ್ಕಾದಲ್ಲಿಯ ಹಳೆಶಿಲಾಯುಗದ ಕೊನೆಯ ಹಂತದ ಕಾಲದ ಚಿತ್ರಗಳಿಗೆ ಹೋಲುತ್ತವೆ. ಈ ಗವಿಗಳ, ಕಲ್ಲಾಸರೆಗಳ ಸಮೀಪದಲ್ಲಿ ನೂತನ ಶಿಲಾಯುಗದ ನೆಲೆಗಳಾಗಲಿ, ಅನಂತರದ ಕಾಲದ ಜನವಾಸ್ತವ್ಯದ ನೆಲೆಗಳಾಗಲಿ ಸುತ್ತಮುತ್ತಲಿನ ಪ್ರಾದೇಶಿಕ ಅನ್ವೇಷಣೆಯಲ್ಲಿ ಬೆಳಕಿಗೆ ಬಂದಿಲ್ಲ. ಆದ್ದರಿಂದ ಇವು ಪ್ರಾಯಶಃ ನೂತನ ಶಿಲಾಯುಗಕ್ಕಿಂತಲೂ ಪೂರ್ವದ್ದಾಗಿರಬಹುದೆಂದು ತೋರುತ್ತದೆ ಮತ್ತು ಈ ಪ್ರದೇಶವು ಪ್ರಾಗೈತಿಹಾಸಿಕ ವರ್ಣಚಿತ್ರಗಳ ಮತ್ತೊಂದು ಕೇಂದ್ರವೆಂದು ಹೇಳಬಹುದು.

ಕಜೂರು ಮತ್ತು ಉಸ್‌ಗಾಲಿಮೋಲ್‌ನಲ್ಲಿಯ ಗೀರು ಚಿತ್ರಗಳು ಕ್ರಮವಾಗಿ ಕುಶಾವತಿ ಹಳ್ಳದ ದಂಡೆಯ ಹತ್ತಿರ ಮತ್ತು ಅದರ ಪಾತ್ರದಲ್ಲಿವೆ. ಕಾಲಮಾನ ದೃಷ್ಟಿಯಿಂದ ಎರಡನೆಯದು ಗಮನಾರ್ಹ. ಇಲ್ಲಿಯ ಚಿತ್ರಗಳು ಹಳ್ಳದ ದಂಡೆ ಹತ್ತಿರ, ಅದರ ಪಾತ್ರದಲ್ಲಿಯ ಸಮತಲ ಜಂಬಿಟ್ಟಿಗೆ ಬಾ ಿಯ ಮೇಲಿವೆ. ಇವುಗಳ ಮೇಲ ಹಳ್ಳದ ದಂಡೆ ನೈಸರ್ಗಿಕವಾಗಿ ನಿರ್ಮಾಣವಾಗಿತ್ತು. ಕ್ರಮೇಣ ಪ್ರವಾಹದ ಕೊರೆತದಿಂದ ದಂಡೆ ಸವೆಯುತ್ತಾ ಬಂದು ಈ ಚಿತ್ರಗಳು ಮತ್ತೆ ಕಾಣತೊಡಗಿದವು. ಚಿತ್ರಣದ ತಾಂತ್ರಿಕತೆಯನ್ನು ಗಮನಿಸಿ ಇವು ಕನಿಷ್ಠ ಪೂರ್ವಭಾವಿ ಇತಿಹಾಸ ಕಾಲದ ಮಧ್ಯ–ಅಂತ್ಯ ಕಾಲದ್ದೆಂದು (ಸು. ಕ್ರಿ.ಪೂ. 1500–100) ಹೇಳಬಹುದು.

ಈಗಾಗಲೇ ಮೇಲೆ ಅಲ್ಲಲ್ಲಿ ಸೂಚಿಸಿದಂತೆ, ಕೆಲವು ಚಿತ್ರಗಳು ಹರಪ್ಪಾ ಸಂಸ್ಕೃತಿಯ ಲಿಪಿಮುದ್ರಿಕೆಗಳಲ್ಲಿಯ ಅಕ್ಷರಗಳಿಗೂ ಚಿತ್ರಗಳಿಗೂ ಹೋಲುತ್ತವೆ. ಭಿಲ್ಲಮರಾಯನ ಗುಡ್ಡದ ಬಿಲ್ಲಿನಾಕಾರದ ಕೋಡುಗಳುಳ್ಳ ಒಂದು ಗೂಳಿಯ ಚಿತ್ರವು, ಈಗಾಗಲೇ ಬಹಳ ಪರಿಚಿತವಾಗಿರುವ ಹರಪ್ಪಾ ಮುದ್ರಿಕೆಯ ಗೂಳಿಯನ್ನು ನೆನಪಿಗೆ ತರುತ್ತದೆ. ಬೆಳಗಲ್ಲು ಮತ್ತು ಚಿತ್ರದುರ್ಗದ ಬಯಲು ಬಂಡೆಯ ಚಿತ್ರಗಳು, ಅಂಜನಹಳ್ಳಿಯ ಗೂಳಿಯ ವರ್ಣಚಿತ್ರಗಳು ಶಿಲಾ–ತಾಮ್ರ–ಯುಗದ ಮೃತಪಾತ್ರೆಗಳ ಮೇಲಿನ ಚಿತ್ರಗಳಂತೆ ಇವೆ. ಹಿರಿ ಬೆನಕಲ್ಲಿನ 5ನೇ ಗವಿಯ ಚಿತ್ರಗಳಲ್ಲಿ ಮನುಷ್ಯನ ಎರಡು ಚಿತ್ರಗಳು ಹರಪ್ಪಾ ಮುದ್ರಿಕೆಗಳಲ್ಲಿಯ ವೇಷ ಧರಿಸಿದ ಮನುಷ್ಯನ ಚಿತ್ರಕ್ಕೂ ಸ್ಥಿರೇಖಾ ಮನುಷ್ಯ ಚಿತ್ರವು ಮೋಟೂರಿನ (ಉತ್ತರ ಆರ್ಕಾಟ್, ತಮಿಳುನಾಡು) ಬೃಹತ್‌ಶಿಲಾ

ಸಂಸ್ಕೃತಿಯ ಮನುಷ್ಯನ ಬೃಹತ್‌ಶಿಲಾ ಸೂಕ್ಷ್ಮ ಚಿತ್ರಕ್ಕೂ ಶೈಲಿಯಲ್ಲಿ ಅತಿ ಸಮೀಪವಾಗಿವೆ ವೆಂಕಟಾಪುರ ಮತ್ತು ಗಾವಳಿಯ ಚಿಹ್ನೆಗಳು ಹರಪ್ಪಾ ಅಕ್ಷರಗಳಂತಿದ್ದರೆ, ನವಿಲುತೀರ್ಥದ ನಾಗಮಂಡಲದಂತೆ ನಾಲ್ಕುಗಂಟಿನ ರೇಖಾಚಿತ್ರವು ಮೊಹೆಂಜೊದಾರೊವಿನ ಒಂದು ಬದಿಯಲ್ಲಿಯ ಅಕ್ಷರಗಳ ಸಾಲುಳ್ಳ ತಾಮ್ರದ ಪಟ್ಟಿಕೆಯ ಮತ್ತೊಂದು ಬದಿಯಲ್ಲಿ ಇಂತಹ ನಾಲ್ಕು ಗಂಟಿನ ರೇಖಾಚಿತ್ರದಂತಿದೆ. ಪಿಕ್ಳಿಹಾಳ, ಅತನೂರು ಮತ್ತು ಹಂಪೆ ಮೊದಲಾದೆಡೆಗಳಲ್ಲಿ ಪದೇ ಪದೇ ಮೊಸಳೆ (ಉಡ?) ಚಿತ್ರಣವು ಹರಪ್ಪಾ ಮುದ್ರಿಕೆಗಳಲ್ಲಿ ಈ ಪ್ರಾಣಿಯ ಚಿತ್ರವನ್ನು ಮೂಡಿಸಿದ ಪದ್ಧತಿಯನ್ನು ನೆನಪಿಗೆ ತರುತ್ತದೆ. ಹಿರಿ ಬೆನಕಲ್ಲಿನ 1ನೇ ಗವಿಯ ಒಬ್ಬ ಮನುಷ್ಯನ ಕೈಯಲ್ಲಿಯ ಮೊನೆಯುಳ್ಳ ಈಟಿ ಹಾಗೂ ಹಂಪೆಯ 1ನೇ ಗವಿಯ ಬಾಣದ ಮೊನೆ ಕ್ರಮವಾಗಿ ಎಲ್ಲೇಶ್ವರಂ (ಗುಂಟೂರು ಜಿಲ್ಲೆ, ಆಂಧ್ರ ಪ್ರದೇಶ) ಹಾಗೂ ಕೊಮಾರನ ಹಳ್ಳಿಯ (ಹರಿಹರ ತಾಲ್ಲೂಕು ಚಿತ್ರದುರ್ಗ ಜಿಲ್ಲೆ) ಬೃಹತ್ ಶಿಲಾಸಮಾಧಿಗಳಲ್ಲಿ ದೊರಕಿದ ಕಬ್ಬಿಣದ ಆಯುಧಗಳ ಪ್ರತಿರೂಪವೋ ಎನ್ನುವಂತಿದೆ. ಇನ್ನು ಕುದುರೆ ಸವಾರರ ಚಿತ್ರದಲ್ಲಿ ಕುದುರೆಯ ಕಡಿವಾಣವನ್ನು ಹಿಡಿದ ರೀತಿಯು ದಕ್ಷಿಣ ಸ್ವೀಡನ್ನಿನ ಕೇವಿಕ್ ಎಂಬಲ್ಲಿಯ ಕಂಚಿನಯುಗದ ಒಂದು ಕಲ್ಲುಸಮಾಧಿಯ ಮುಚ್ಚಳದ ಮೇಲಿನ ಗೀರಿದ ಜೋಡಿಕುದುರೆ ರಥದ ಚಿತ್ರದಲ್ಲಿಯ ಲಗಾಮನ್ನು ಹಿಡಿದ ರೀತಿಗೆ ಸ್ಪಷ್ಟವಾಗಿ ಹೋಲುತ್ತದೆ. ಮೇಲೆ ಹೇಳಿದಂತೆ ಈ ಗವಿಯ ಕಲ್ಲಾಸರ ಚಿತ್ರಗಳ ಮತ್ತು ಬಯಲುಬಂಡೆ ಚಿತ್ರಗಳ ಬಳಿ ಶಿಲಾ–ತಾಮ್ರಯುಗ ಮತ್ತು ಬೃಹತ್‌ಶಿಲಾ ಸಂಸ್ಕೃತಿಯ ವಾಸ್ತವ್ಯದ ಕಲ್ಲು ಸಮಾಧಿಗಳ ನೆಲೆಗಳಿವೆ. ಆದ್ದರಿಂದ ಹಿರೇಬೆನಕಲ್– ಹಂಪೆ ಹಾಗೂ ಇದರ ಸುತ್ತಮುತ್ತಲಿನ ಕುರಗೋಡು ಪಿಕ್ಳಿಹಾಳ–ತಾವರಗೇರಿ–ಮಸ್ಕಿ ಮತ್ತು ಬೆಳಗಲ್ಲು–ಹಳಕುಂಡಿ, ಕಲ್ಲೂರು, ಭಿಲ್ಲಮರಾಯನಗುಡ್ಡ ಪ್ರದೇಶದ ಈ ಚಿತ್ರಗಳೆಲ್ಲವು ಬಹುಶಃ ಶಿಲಾ–ತಾಮ್ರಯುಗದ ಕೊನೆಯ ಹಂತ (ಕ್ರಿ. ಪೂ. ಸು. 1400–800) ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಆದಿಮಧ್ಯಭಾಗದ (ಕ್ರಿ.ಪೂ. ಸು. 1000–500 ಕಾಲದ್ದೆಂದು ನಿರ್ಣಯಿಸಲು ಅಡ್ಡಿಯಿಲ್ಲ.

ಗವಿ ವರ್ಣಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಇವುಗಳ ಪ್ರಸಾರವ್ಯಾಪ್ತಿಯೂ ಹೆಚ್ಚು ಆದರೂ ಹಿರೆ ಬೆನಕಲ್ ಹಂಪೆ ಪ್ರದೇಶದಲ್ಲಿ ಹೆಚ್ಚಾಗಿವೆ. ಆದ್ದರಿಂದ ಉತ್ತರ ಕರ್ನಾಟಕದಲ್ಲಿ ಈ ಭಾಗವು ಈ ಚಿತ್ರಕಲೆಯ ಕೇಂದ್ರ ಸ್ಥಾನವೆಂದು ಹೇಳಬಹುದು. ಈ ಪ್ರದೇಶದಲ್ಲಿ ಬಯಲುಬಂಡೆ ಚಿತ್ರಗಳು ಇದುವರೆಗೆ ಕಣ್ಣಿಗೆ ಬಿದ್ದಿಲ್ಲ. ಕೆಲವು ಬಯಲುಬಂಡೆ ಮತ್ತು ಗವಿವರ್ಣ ಚಿತ್ರಗಳು ಶೈಲಿಯಲ್ಲಿ ಒಂದೇ ತೆರನಾಗಿದ್ದು, ಅವು ಸಮಕಾಲೀನವೆಂದು ಸೂಚಿಸುತ್ತವೆ

ಬಯಲು ಬಂಡೆ ಚಿತ್ರಗಳು ವರ್ಣಚಿತ್ರಗಳಷ್ಟು ವೈವಿಧ್ಯಮಯವಾಗಿಲ್ಲ. ಜೊತೆಗೆ ಇವೆರಡು ಪ್ರಕಾರದ ಚಿತ್ರಗಳ ಸಮೀಪದಲ್ಲಿ ಶಿಲಾ–ತಾಮ್ರಯುಗ ಮತ್ತು ಬೃಹತ್‌ಶಿಲಾ ಸಂಸ್ಕೃತಿಗ

ನೆಲೆಗಳಿವೆ. ಮತ್ತು ಈ ಸಂಸ್ಕೃತಿಗಳ ಜನರೆ ಬಹುಮಟ್ಟಿಗೆ ಈ ಚಿತ್ರಗಳ ಕರ್ತೃಗಳೆಂದು ಮೇಲೆ ತರ್ಕಿಸಿದೆ. ಆದರೂ ಇವೆರಡೂ ಪ್ರಕಾರದ ಚಿತ್ರಗಳಲ್ಲಿ ಮೇಲೆ ವಿವರಿಸಿದ ಕೆಲವೊಂದು ಸ್ಪಷ್ಟ ಭಿನ್ನತೆಯಿರುವುದರಲ್ಲಿ ಒಂದು ಅರ್ಥವಿರಬೇಕು. ನನಗೆ ತಿಳಿದ ಮಟ್ಟಿಗೆ, ಈ ಸಂಸ್ಕೃತಿಗಳ ಜನರಲ್ಲಿ ಕೆಲವು ವರ್ಗಗಳಿದ್ದಿರಬೇಕು. ನಮ್ಮಲ್ಲಿಯ ಈಗಿನ ಗೌಳಿಗ ಗೊಲ್ಲರ ಹಾಗೆ ಕೇವಲ ಪಶುಪಾಲನೆಯ ವೃತ್ತಿಯ ಜನವರ್ಗಕ್ಕೆ ಹೆಚ್ಚಾಗಿ ಬಯಲುಬಂಡೆ ಚಿತ್ರಗಳು ಸೇರಿರಬೇಕೆಂದು ಕಾರಣಬದ್ಧವಾಗಿ ಊಹಿಸಬಹುದು. ವರ್ಣಚಿತ್ರಗಳು ಈ ಸಂಸ್ಕೃತಿಗಳ ಸಮಾಜದ ಬಹಳಷ್ಟು ಎಲ್ಲ ವರ್ಗಗಳಿಗೂ ಸಂಬಂಧಪಟ್ಟಿದ್ದಿರಬೇಕೆಂದು ಕಾಣುತ್ತದೆ.

ಬಾದಾಮಿಯ 3ನೇ ಗವಿವರ್ಣ ಚಿತ್ರವು ವಸ್ತು, ಶೈಲಿ ಹಾಗೂ ತಾಂತ್ರಿಕತೆಯ ಆಧಾರದ ಮೇಲೆ ಹಾಗೂ ಸಮೀಪದ ಮಧ್ಯಯುಗೀನ ಜನ ವಾಸ್ತವ್ಯದ ನೆಲೆಗಳ ಇರುವಿಕೆಯ ಮೇಲೆ ನಿಸ್ಸಂಶಯವಾಗಿ ಬಾದಾಮಿ ಚಾಲುಕ್ಯರ ಕಾಲದ್ದು. ಇದೇ ಆಧಾರದ ಮೇಲೆ ಬೈಲ್‌ಮರ್ಚೆಡ್ (ಮಾಸ್ಕಿ ತಾಲ್ಲೂಕು) ಮತ್ತು ಮಾಸ್ಕಿಯ ಚಿತ್ರಗಳು ವಿಜಯನಗರ ಕಾಲದವೆಂದು ಹೇಳಬಹುದು. ಇತ್ತೀಚೆಗೆ ಬೆಳಕಿಗೆ ಬಂದ ಚಿತ್ರದುರ್ಗ, ಬ್ರಹ್ಮಗಿರಿ ಮತ್ತು ಅಪ್ಪಯ್ಯನಹಳ್ಳಿಯ ಕೆಲವು ಗವಿ ವರ್ಣ ಚಿತ್ರಗಳು ಮತ್ತು ಕೆಲವು ಬಯಲು ಬಂಡೆಯ ಚಿತ್ರಗಳು, ಸಂಗನಕಲ್ಲು, ಹಳಕುಂಡಿ ಮತ್ತು ಭಿಲ್ಲಮರಾಯನಗುಡ್ಡಗಳಲ್ಲಿಯ ಹನುಮಾನ್, ಮುಸಲ್ಮಾನ್ ಪಂಥದ ಪಂಜ, ರೈಲುಬಂಡಿ, ಕತ್ತಿ ಡಾಲು ಹಿಡಿದ ಮನುಷ್ಯರು ಮೊದಲಾದ ಕೆಲವು ಬಯಲು ಬಂಡೆ ಚಿತ್ರಗಳು ವಿಜಯನಗರ ಉತ್ತರ ಭಾಗದ ಮತ್ತು ಸಮಕಾಲೀನ ಕಾಲದವೆಂದು ತಿಳಿಯಲಡ್ಡಿಯಿಲ್ಲ.□

# 8. ಇತರ ಕಲಾಕೃತಿಗಳು

## ಮೃತ ಪಾತ್ರೆ ವರ್ಣಚಿತ್ರಗಳು

ಕರ್ನಾಟಕದಲ್ಲೆಲ್ಲ ನೂತನ ಶಿಲಾ–ತಾಮ್ರಯುಗದ ಸಂಸ್ಕೃತಿಯು ಒಂದೇ ತೆರನಾಗಿಲ್ಲ. ಈ ಸಂಸ್ಕೃತಿಯ ನಿತ್ಯ ಜೀವನದ ಬಳಕೆಯ ವಸ್ತುಗಳಾದ ಕಲ್ಲಿನ ಆಯುಧಗಳಲ್ಲಿ, ಗಡಿಗೆ–ಮಡಕೆಗಳಲ್ಲಿ ಮತ್ತು ತಾಮ್ರ–ಕಂಚಿನ ಉಪಯೋಗದಲ್ಲಿ ಆಯಾಯಾ ಪ್ರದೇಶಗಳಲ್ಲಿ ಬೇರೆ ಬೇರೆ ವಿಧಗಳಿವೆ. ಈ ವೈವಿಧ್ಯತೆಗಳಿಗನುಗುಣವಾಗಿ ಈ ಸಂಸ್ಕೃತಿಯನ್ನು ಮುಖ್ಯವಾಗಿ ನಾಲ್ಕು ಉಪಪ್ರಾದೇಶಿಕ ಸಂಸ್ಕೃತಿಗಳನ್ನಾಗಿ ವಿಂಗಡಿಸಬಹುದು.

1. ಕೃಷ್ಣಾ ನದಿ ಬಯಲಿನ ಶಿಲಾ–ತಾಮ್ರಯುಗ (ಮಸ್ಕಿ) ಸಂಸ್ಕೃತಿ.
2. ಕೃಷಾ ಮೇಲ್ದಂಡೆ ಬಯಲಿನ ಶಿಲಾ–ತಾಮ್ರಯುಗ (ಸತ್ತಿ) ಸಂಸ್ಕೃತಿ.
3. ತುಂಗಭದ್ರಾ–ಕಾವೇರಿ ಬಯಲಿನ ನೂತನ ಶಿಲಾಯುಗ (ಟಿ. ನರಸಿಪುರ) ಸಂಸ್ಕೃತಿ.
4. ಭೀಮಾ ನದಿ ಬಯಲಿನ–ಶಿಲಾ–ತಾಮ್ರಯುಗ (ಜೋರ್ವೆ) ಸಂಸ್ಕೃತಿ.

ಈ ಸಂಸ್ಕೃತಿಗಳ ಮೃತ್‌ಪಾತ್ರೆ ವರ್ಣಚಿತ್ರಗಳು ಬೇರೆ ಬೇರೆ ವಿಧವಾಗಿವೆ. ಇವುಗಳಲ್ಲದೆ ತುಂಗಭದ್ರಾ ನದಿ ಬಯಲಿನಲ್ಲಿ ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯ ಕಪ್ಪು–ಕೆಂಪು ಬಣ್ಣದ ಪಾತ್ರೆಗಳ ಮೇಲೂ ಬಿಳಿವರ್ಣ ರೇಖಾ ಚಿತ್ರಗಳಿವೆ.

ಸಾಮಾನ್ಯವಾಗಿ ಇವು ರೇಖಾಚಿತ್ರಗಳಾಗಿದ್ದು ಪಾತ್ರೆಗಳ ಅಲಂಕರಣಕ್ಕೋಸ್ಕರ ಬಿಡಿಸಲಾಗಿದೆ. ಅಪರೂಪವಾಗಿ ಪ್ರಾಣಿ, ಪಕ್ಷಿಗಳ ಚಿತ್ರಗಳೂ ಇರುತ್ತವೆ. ಮಣ್ಣಿನ ಪಾತ್ರೆಗಳನ್ನು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿದ ಮೇಲೆ, ಭಟ್ಟಿಯಲ್ಲಿ ಸುಡುವುದಕ್ಕೆ ಮುಂಚೆಯೇ ಅವುಗಳ ಮೇಲೆ ಚಿತ್ರಗಳನ್ನು ಬಿಡಿಸಲಾಗಿದೆ. ಬಣ್ಣ ಒಣಗಿದ ಮೇಲೆ ಆ ಪಾತ್ರೆಗಳನ್ನು ಭಟ್ಟಿಯಲ್ಲಿ ಸುಡಲಾಗಿದೆ. ಹೀಗೆ ಮಾಡುವುದರಿಂದ ಆ ಪಾತ್ರೆಗಳನ್ನು ನೀರಿನಲ್ಲಿ ತೊಳೆದರೂ ಅವುಗಳ ಮೇಲಿನ ಬಣ್ಣ ಚಿತ್ರಗಳು ಅಳಿಸಿ ಹೋಗುವುದಿಲ್ಲ. ಸಾವಿರಾರು ವರ್ಷಗಳಿಂದಲೂ ಇಂಥ ಪಾತ್ರೆಗಳ ಚೂರುಗಳು ಮಣ್ಣಿನಲ್ಲಿದ್ದರೂ, ಮಳೆ ಬಿಸಿಲು ಗಾಳಿಗಳಿಗೆ ಸೋಕಿದ್ದರೂ ಇವುಗಳ ಚಿತ್ರಗಳು ಸ್ವಲ್ಪಮಟ್ಟಿಗೆ ಮಸುಕಾದರೂ ನಾಶವಾಗಿಲ್ಲ.

ಪಾತ್ರೆಗಳ ಬಾಯಿಯ ಅಂಚಿನಲ್ಲಿ ಹೊರ/ಒಳಬದಿಯಲ್ಲಿ, ತುದಿಯಲ್ಲಿ, ಕಂಠ, ಭುಜ ಮತ್ತು ಹೊಟ್ಟೆ ಭಾಗಗಳ ಹೊರಮೈಯ ಮೇಲೆ ಗೆರೆ ಚಿತ್ರಗಳಿರುತ್ತವೆ. ಅರ್ಧ ಗೋಲಾಕೃತಿಯ ಬಟ್ಟಲುಗಳಲ್ಲಿ ಒಳ/ಹೊರ ಭಾಗಗಳ ಬುಡಗಳಲ್ಲಿಯೂ ಇಂಥ ಚಿತ್ರಗಳಿರಬಹುದು. ಈ ಚಿತ್ರಗಳನ್ನು ಬರೆಯಲು ಉಪಯೋಗಿಸಿದ ನೇರಳೆ ಬಣ್ಣ ಖನಿಜಗಳ ಆಕ್ಸೈಡ್‌ಗಳಿಂದ ಮಾಡಿರಬೇಕೆಂದು ವೈಜ್ಞಾನಿಕ ಪರೀಕ್ಷೆಯಿಂದ ತಿಳಿದಿದೆ.

ಇನ್ನೊಂದು ವಿಧವಾದ ಬಣ್ಣದ ಗೆರೆಗಳು ಹೆಚ್ಚಾಗಿ ಕಾವೇರಿ–ತುಂಗಭದ್ರೆ ಬಯಲಿನ ನೂತನ ಶಿಲಾ ಸಂಸ್ಕೃತಿಗಳ ಬೂದು ಬಣ್ಣದ ಪಾತ್ರೆಗಳ ಮೇಲೆ ತೋರಿ ಬಂದಿವೆ. ಪಾತ್ರೆಗಳನ್ನು ಸುಟ್ಟ ನಂತರ, ಅವುಗಳ ಮೇಲೆ ಕೆಮ್ಮಣ್ಣಿನ ಬಣ್ಣದಲ್ಲಿ ಒಂದೆರಡು ಸರಳ ಅಗಲ ಗೆರೆಗಳನ್ನು ಎಳೆಯಲಾಗಿದೆ.

ಸೂಕ್ಷ್ಮವಾದ ಮರದ ಕಡ್ಡಿಯ ತುದಿಯನ್ನು ಜಜ್ಜಿ ಕುಂಚವನ್ನಾಗಿ ಮಾಡಿ ಇದರಿಂದ ಬಣ್ಣದ ಗೆರೆಗಳನ್ನು ಎಳೆದಿರಬೇಕೆಂದು ಊಹೆ.

ಮೃತ್ ಪಾತ್ರೆ ವರ್ಣಚಿತ್ರಗಳಲ್ಲಿ ಬಹಳ ಪ್ರಾಚೀನತಮವಾದುದು ಕೃಷ್ಣಾ ಬದಿ ಬಯಲಿನಲ್ಲಿಯ ಮಸ್ಕಿ ಸಂಸ್ಕೃತಿಯ ಬೂದುವರ್ಣ ಪಾತ್ರೆಗಳಿದ್ದು ಬ್ರಹ್ಮಗಿರಿ, ಮಸ್ಕಿ, ಪಿಕ್ಕಿಹಾಳ, ಕೊಡೆಕಲ್ಲು, ತೇರದಾಳ ಉತ್ಖನನಗಳಲ್ಲಿ ತೋರಿದ ಈ ಸಂಸ್ಕೃತಿಯ ಕಾಲಮಾನ ಇಂಗಾಲ–14 ಎಂಬ ವೈಜ್ಞಾನಿಕ ಪರೀಕ್ಷೆಯ ಪ್ರಕಾರ, ಸು. ಕ್ರಿ. ಪೂ. 2200ರಿಂದ 1500ರ ವರೆಗೆ. ಪ್ರಥಮ ಬಾರಿಗೆ ಬ್ರಹ್ಮಗಿರಿ ಉತ್ಖನನಗಳಲ್ಲಿ ಅತ್ಯಂತ ಪ್ರಾಚೀನ ಹಾಳು ಮಣ್ಣಿನ ಪದರುಗಳಲ್ಲಿ ಈ ಸಂಸ್ಕೃತಿಯ ಇಂಥ ವರ್ಣಚಿತ್ರಿತ ಪಾತ್ರೆಗಳು ಬಹಳ ಅಲ್ಪ ಪ್ರಮಾಣದಲ್ಲಿ ದೊರೆತವು. ನಂತರ ಮಸ್ಕಿ ಮತ್ತು ಪಿಕ್ಕಿಹಾಳ ಉತ್ಖನನಗಳಲ್ಲಿಯೂ ಸಮಕಾಲೀನ ಹಂತಗಳಲ್ಲಿ ಅತಿ ಸ್ವಲ್ಪ ಸಂಖ್ಯೆಯಲ್ಲಿ ಸಿಕ್ಕವು.

ಈ ಸಂಸ್ಕೃತಿಯ ಕೊನೆಯ ಹಂತದ ಪದರಿನಲ್ಲಿ ಜೋರ್ವೆ ಸಂಸ್ಕೃತಿಯ ಭಿನ್ನವಾದ ವರ್ಣ ಚಿತ್ರಿತ ಕೆಲವೇ ಕೆಂಪು ಬಣ್ಣದ ಮಡಿಕೆ ಚೂರುಗಳಿದ್ದವು. ಇಂಥ ಚಿತ್ರಿತ ಗಡಿಗೆ, ಮಡಕೆಗಳು ಗೋದಾವರಿ ಬಯಲಿನಲ್ಲಿಯ ಶಿಲಾ–ತಾಮ್ರಯುಗದ ಸಂಸ್ಕೃತಿಯದೆಂದು ಜೋರ್ವೆ, ನಾಸಿಕ್, ನೇವಾಸಗಳಲ್ಲಿಯ ಉತ್ಖನನಗಳಿಂದ ತಿಳಿದಿದೆ. ಕ್ರಮೇಣ ಜನ ಹಾಗೂ ವ್ಯಾಪಾರ ಸಂಪರ್ಕದಿಂದ ಒಂದು ಪ್ರದೇಶ ಸಂಸ್ಕೃತಿಯ ವಿಶಿಷ್ಟ ವಸ್ತುಗಳು ಮತ್ತೊಂದು ಪ್ರದೇಶದ ಸಂಸ್ಕೃತಿಯಲ್ಲಿ ಪರಸ್ಪರ ಕಾಣಿಸಿಕೊಂಡಿದೆಯೆಂಬುದು ಖಚಿತವಾಗಿದೆ. ಈ ಸಂಪರ್ಕ ಸು. ಕ್ರಿ. ಪೂ. 1200–900ರಲ್ಲಿತ್ತೆಂದು ಗೊತ್ತಾಗಿದೆ.

ಕೃಷ್ಣಾ ನದಿ ಸಂಸ್ಕೃತಿಯ ಬೂದುವರ್ಣದ ಪಾತ್ರೆಗಳ ಜೊತೆಗೆ ಕೆಮ್ಮಣ್ಣಿನ ಬಣ್ಣಗೆರೆಗಳುಳ್ಳ ಕೆಲವು ಪಾತ್ರೆ ಚೂರುಗಳೂ ದೊರೆತವು. ಕಾವೇರಿ ನದಿ ಬಯಲಿನಲ್ಲಿರುವ ಟಿ. ನರಸಿಪುರ

ಉತ್ಖನನಗಳಲ್ಲಿಯ ತೋರಿದ ನೂತನ ಶಿಲಾಯುಗದ ಸಂಸ್ಕೃತಿಯ ಮೃತ್ ಪಾತ್ರೆಗಳಲ್ಲಿ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಇಂಥ ವರ್ಣ ಚಿತ್ರಗಳಿವೆ. ಈ ಸಂಸ್ಕೃತಿಯ ಕಾಲಮಾನ ಸು. ಕ್ರಿ. ಪೂ. 1800–900.

## ಈಚಿನ ಶೋಧನೆಗಳು:

ಭೀಮಾ ನದಿಯ ಮತ್ತು ಕೃಷ್ಣಾ ನದಿಯ ಮೇಲ್ದಂಡೆ (ಬೆಳಗಾಂವ ಮತ್ತು ಬಿಜಾಪುರ ಜಿಲ್ಲೆಯ ಉತ್ತರ ಭಾಗ) ಪ್ರದೇಶಗಳಲ್ಲಿಯ ನನ್ನ ಶೋಧನೆಗಳಲ್ಲಿ ಕ್ರಮವಾಗಿ ಜೋರ್ವೆ ಮತ್ತು ಮಸ್ಕಿ ಸಂಸ್ಕೃತಿಯ ನೂರಾರು ವರ್ಣಚಿತ್ರಿತ ಮಣ್ಣಿನ ಪಾತ್ರೆಗಳ ಚೂರುಗಳು ದೊರೆತು ಈ ಎರಡು ಸಂಸ್ಕೃತಿಗಳ ನೇರಳೆ ವರ್ಣಚಿತ್ರಗಳ ವಿಪುಲತೆ, ವೈವಿಧ್ಯತೆ ಮತ್ತು ವೈಶಿಷ್ಟ್ಯ ಪ್ರಥಮ ಬಾರಿಗೆ ತಿಳಿಯಿತು. ಇವಲ್ಲದೆ ಅಪರೂಪವಾಗಿ ಮಸುಕಾದ ಗಂಜಿಯಂಥ ಬಿಳಿಬಣ್ಣದಲ್ಲೂ, ನಸುಗೆಂಪು ಬಣ್ಣದಲ್ಲೂ, ರೇಖಾಚಿತ್ರಗಳುಳ್ಳ ಪಾತ್ರೆ ಚೂರುಗಳೂ ಪ್ರಥಮ ಬಾರಿಗೆ ಕಂಡು ಬಂದಿವೆ.

### ಕೃಷ್ಣಾನದಿ ಬಯಲಿನ ಶಿಲಾ–ತಾಮ್ರಯುಗ ಸಂಸ್ಕೃತಿಯ ಚಿತ್ರಗಳು.

ಮಸ್ಕಿ ಸಂಸ್ಕೃತಿಯ ನೇರಳೆ ಬಣ್ಣದ ಚಿತ್ರಗಳಲ್ಲಿ ಅಡ್ಡ ಉದ್ದ, ಓರೆ, ಕತ್ತರಿಯಾಗಿ ಬಿಡಿಸಿದ ಸಮಾನಾಂತರ ಬಿಡಿಗೆರೆಗಳಲ್ಲದೆ, ಅರ್ಥವಾಗದ ಕೆಲವು ವಿಚಿತ್ರ ರೇಖಾ ಚಿತ್ರಗಳೂ ಇವೆ. ಇಂಥ ಚಿತ್ರಗಳು ಕರ್ನಾಟಕದಲ್ಲಿ ಏಕೆ ಆಂಧ್ರಪ್ರದೇಶದ ಸಿಂಗನಪಲ್ಲಿ ಪ್ರದೇಶವನ್ನು ಬಿಟ್ಟರೆ, ಭಾರತದಲ್ಲಿ ಮತ್ತೆಲ್ಲಿಯೂ ಇದುವರೆಗೆ ಸಿಕ್ಕಿಲ್ಲ. ಇವಲ್ಲದೆ, ಮತ್ತೆ ಕೆಲವು ಜೋಡಿ ಮೀನು, ಕೊಕ್ಕರೆ, ಕೊಂಬೆಗಳುಳ್ಳ ಗಿಡಗಳಂತಹುದು ಮತ್ತು ಬಾಣಗಳಂತಹುದು. ಸತ್ತಿಯಲ್ಲಿ ಸಿಕ್ಕ ಮೀನು ಹಿಡಿಯುತ್ತಿರುವ ಕೊಕ್ಕರೆಯ ಚಿತ್ರ ಬಹಳ ನೈಜವಾಗಿದ್ದು ಉತ್ತಮ ಚಿತ್ರಕಲೆಗೆ ಒಂದು ನಿದರ್ಶನವೆಂದು ಹೇಳಬಹುದು. ಬಣ್ಣದ ಚಿತ್ರವು ಸರಿಯಾಗಿ ಕ್ರಮವಾಗಿ ಬಿಡಿಸಲ್ಪಟ್ಟಿದೆ.

ಕೆಲವು ಮಣ್ಣಿನ ಪಾತ್ರೆಗಳಲ್ಲಿ ಎರಡು ಬಣ್ಣಗಳ ಚಿತ್ರಗಳಿವೆ. ಕೆಲವು ಗೆರೆಗಳು ನೇರಳೆ ಬಣ್ಣದಲ್ಲಿದ್ದರೆ, ಅವುಗಳ ಪಕ್ಕದಲ್ಲಿ ಅಥವಾ ಅವುಗಳನ್ನು ಭೇದಿಸುವ ಗೆರೆಗಳು ಕೆಂಪು ಬಣ್ಣದಲ್ಲಿವೆ.

### ಕೃಷ್ಣಾ ಮೇಲ್ದಂಡೆಯ ಸಂಸ್ಕೃತಿಯ ಹೊಸ ಮಾದರಿಯ ಚಿತ್ರಗಳು

ಕೃಷ್ಣಾನದಿ ಮೇಲ್ದಂಡೆ ಪ್ರದೇಶದಲ್ಲಿಯ ಮೃತ್ ಪಾತ್ರೆಗಳೊಡನೆ, ಪೂರ್ಣವಾಗಿ ಬೇರೆ ವಿಧದ ಚಿತ್ರಿತ ಕೆಂಪು ಮತ್ತು ಬೂದುವರ್ಣದ ಮಣ್ಣಿನ ಪಾತ್ರೆಗಳು ದೊಡ್ಡ ಪ್ರಮಾಣದಲ್ಲಿಯೇ

ಹೆಚ್ಚಾಗಿ ಮಂಗಸೂಳಿ ಸತ್ತಿ (ಅಥಣಿ ತಾಲ್ಲೂಕು ಬೆಳಗಾಂವ ಜಿಲ್ಲೆ)ಯಲ್ಲಿ ಸಿಕ್ಕವು. ಇವು ಒಂದು ಪ್ರತ್ಯೇಕವಾದ ಶಿಲಾ–ತಾಮ್ರಯುಗದ ಸಂಸ್ಕೃತಿಯದೆಂದು ಪ್ರಮಾಣಬದ್ಧವಾಗಿ ತಿಳಿದಿದೆ. ಇಂಥ ಮೃತ್ ಪಾತ್ರೆಗಳು ಕರ್ನಾಟಕದಲ್ಲಿ ಮತ್ತೆಲ್ಲಿಯೂ ಇದುವರೆಗೆ ಸಿಕ್ಕಿಲ್ಲ. ಈ ಸಂಸ್ಕೃತಿಯ ಕೆಲವು ಬಣ್ಣದ ಪಾತ್ರೆಗಳು ಮಹಾರಾಷ್ಟ್ರದ ತಪತೀನದಿ ಬಯಲಿನ ಸಾವಳ್ದ ಮುಂತಾದೆಡೆಗಳಲ್ಲಿ ಸಿಕ್ಕಿವೆ. ಆದರೆ ಅವು ಇಷ್ಟು ವೈವಿಧ್ಯಮಾನವಾಗಿಲ್ಲ. ಮಸ್ಕಿ ಸಂಸ್ಕೃತಿಯ ಪಾತ್ರೆಗಳಲ್ಲಿಯ ಜೋಡಿ ಮೀನು, ಬಾಣದ ಚಿತ್ರಗಳು ಈ ಹೊಸ ಸಂಸ್ಕೃತಿಯ ಪಾತ್ರೆಗಳಲ್ಲಿ ಸಾಮಾನ್ಯವಾಗಿ ಇವೆ. ಅಂದರೆ ಹೊಸದಾಗಿ ಶೋಧವಾದ ಈ (ಸತ್ತಿ) ಸಂಸ್ಕೃತಿ ವರ್ಣ ಚಿತ್ರಗಳಲ್ಲಿ ಜೋಡಿ ಮೀನು, ಬಾಣಗಳ ಚಿತ್ರಗಳು ವಿಶಿಷ್ಟವಾಗಿವೆಯೆಂದು ಹೇಳಬಹುದು. ಒಂದು ಘಟ್ಟದಲ್ಲಿ ಈ ಎರಡೂ ಸಂಸ್ಕೃತಿಗಳು ಸಮಕಾಲೀನವಾಗಿದ್ದು, ಒಂದಕ್ಕೊಂದು ಸಂಪರ್ಕ ಹೊಂದಿದ್ದವೆಂದು ತೋರುತ್ತದೆ.

ಕೆಂಪು ಬಣ್ಣದ ಮೃತ್ ಪಾತ್ರೆಗಳ ಮೇಲಿನ ರೇಖಾ ಚಿತ್ರಗಳು ಸರಳವಾಗಿದ್ದು, ಸರಿಯಾಗಿ, ಕ್ರಮವಾಗಿ ಒಂದೇ ಪ್ರಕಾರವಾಗಿ ಎಳೆದ ಗೆರೆಗಳಿಂದ ಕೂಡಿವೆ. ಮತ್ತು ಅಳತೆಪಟ್ಟಿಯ ಸಹಾಯದಿಂದ ಎಳೆದ ಹಾಗಿವೆ. ಅಡ್ಡ ಉದ್ದ, ಕತ್ತರಿಯಾಗಿ ಎಳೆದ ಸಮಾನಾಂತರದ ಬಿಡಿ ಗೆರೆಗಳು, ಡೊಂಕು ಗೆರೆಗಳು, ಸರಪಳಿ, ಚುಕ್ಕೆಗಳ ಸಾಲು ಮತ್ತು ವಿಚಿತ್ರವಾದ ರೇಖಾಚಿತ್ರಗಳು ಒಂದು ವಿಧವಾಗಿದ್ದರೆ, ಬಾಣಗಳು, ಗಿಡಗಳಂಥ ನಮೂನೆಗಳು, ಮೀನು, ನವಿಲು ಮತ್ತು ಅನೇಕ ಮುಳ್ಳುಗಳುಳ್ಳ ಗಾಳಗಳ ಚಿತ್ರಗಳು ಮತ್ತೊಂದು ವಿಧ. ಎರಡನೆಯ ವಿಧದ ಚಿತ್ರಗಳು ಹೆಚ್ಚಾಗಿವೆ. ಇಂಥ ಪಾತ್ರೆಗಳ ಜೊತೆಗೆ ಬೂದು ವರ್ಣದ ಪಾತ್ರೆಗಳಿದ್ದು, ಅವುಗಳ ಮೇಲೆ ಅಚ್ಚ ಕಾಡಿಗೆ ಕಪ್ಪು, ಕಂದು ಮತ್ತು ಶುಭ್ರ ಬಿಳಿ ಬಣ್ಣದ ಸರಳ ರೇಖಾ ಚಿತ್ರಗಳಿವೆ. ಇಂಥ ಚಿತ್ರಗಳೂ ಭಾರತದ ಬೇರೆಡೆಗಳಲ್ಲಿ ಇದುವರೆಗೆ ದೊರೆತಿಲ್ಲ.

ಅಪರೂಪವಾಗಿ ಕಪ್ಪು–ಕೆಂಪು ಬಣ್ಣದ ಪಾತ್ರೆಗಳ ಮೇಲೆ ಮಸುಕಾದ ಬಿಳಿಗೆರೆಗಳ ಚಿತ್ರಗಳಿರುತ್ತವೆ. ಆದರೆ ಇವು ಕೇವಲ ಸಮಾನಾಂತರದ ಓರೆ ಅಥವಾ ಊರ್ಧ್ವ ಬಿಡಿ ಗೆರೆಗಳ ಗುಚ್ಛಗಳ ಅಪರೂಪವಾಗಿ ಪರಸ್ಪರ ಛೇದಿಸಿದ ಒಂದೇ ಪ್ರಕಾರವಾಗಿ ಒಂದು ಬದಿಯಿಂದ ಸಣ್ಣ ಸಣ್ಣ ಅಡ್ಡಗೆರೆಗಳಿರುವ ಚಿತ್ರಗಳು ಇವೆ. ಈ ರೀತಿ ಚಿತ್ರಿಸುವ ಪದ್ಧತಿ ತುಂಗಭದ್ರಾ ನದಿಯ ಮೇಲ್ದಂಡೆಯ ಪ್ರದೇಶದ ಬೆನಕನಹಳ್ಳಿಯಲ್ಲಿ ಶಿಲಾ–ತಾಮ್ರಯುಗ ಕೊನೆಯ ಹಂತದಿಂದ ಮುಂದುವರೆದುದು ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ ಹಂತದಲ್ಲಿ ಕೊಮರನಹಳ್ಳಿ ತಡಕನಹಳ್ಳಿ ಮತ್ತು ಹಳ್ಳೂರುಗಳಲ್ಲಿ ಹೇರಳವಾಗಿ ಕಾಣಿಸಿಕೊಳ್ಳುತ್ತದೆ. ಈ ಹಂತದಿಂದ ಮುಂದಿನ ಇತಿಹಾಸ ಆರಂಭಕಾಲದ ಸಂಸ್ಕೃತಿ ಹಂತದಲ್ಲಿ ವಿಶಿಷ್ಟ ರೀತಿಯಲ್ಲಿ ಮುಂದುವರೆಯುತ್ತದೆ. ಈ ಹಂತದಲ್ಲಿ ಬಟ್ಟಲು ಮೊದಲಾದ ಮಧ್ಯಮ ಅಳತೆಯ ಪಾತ್ರೆಗಳ ಮೇಲೆ (ಬಿಳಿ ಬಣ್ಣದ)

ರೇಖಾಚಿತ್ರಗಳನ್ನು ಎಳೆದು ಅವುಗಳ ಮೇಲೆ ಅರಶಿನಗೆಂಪಿನ ಬಣ್ಣವನ್ನು ಬಳಿಯಲಾಗುತ್ತಿತ್ತು. ಈ ಅಲಂಕರಣ ಪದ್ಧತಿಯು ದಕ್ಷಿಣ ಭಾರತದಲ್ಲೆಲ್ಲ ಬಳಕೆಯಲ್ಲಿತ್ತು. ಗುಜರಾತ ಪ್ರದೇಶದಲ್ಲಿ ಲೋಥಾಲ್ ಮೊದಲಾದ ಸ್ಥಳಗಳಲ್ಲಿಯ ಹರಪ್ಪಾ ನಾಗರಿಕತೆಯ ಅತ್ಯಂತ ಪ್ರಾಚೀನ ಹಂತದಿಂದ ಇಂಥ ಮಣ್ಣಿನ ಪಾತ್ರೆಗಳು ಬಳಕೆಯಲ್ಲಿದ್ದು ಅವುಗಳಲ್ಲಿ ಬಿಳಿಬಣ್ಣದ ರೇಖಾ ಚಿತ್ರಗಳಿವೆ. ತುಂಗಭದ್ರಾ ನದಿ ಬಯಲಿನ ಕಪ್ಪು–ಕೆಂಪಿನ ಪಾತ್ರೆಗಳ ಆಕಾರ ಮತ್ತು ಅವುಗಳ ಮೇಲಿನ ವರ್ಣಚಿತ್ರಗಳು ಅವುಗಳಿಗೆ ತುಂಬ ಹೋಲುತ್ತವೆ.

ಈ ರೀತಿ ವಿವಿಧ ಪ್ರಕಾರಗಳಲ್ಲಿ ಮೃತ್ ಪಾತ್ರೆಗಳನ್ನು ಅಲಂಕರಿಸುವ ಪದ್ಧತಿ ಹರಪ್ಪಾ ನಾಗರಿಕತೆ (ಕ್ರಿ. ಪೂ. ಸು. 2500–1750) ಸೇರಿದಂತೆ ಇದಕ್ಕೂ ಪೂರ್ವದಲ್ಲಿ ಬಲೂಚಿಸ್ಥಾನ–ಅಫ್‌ಘಾನಿಸ್ಥಾನ ಪ್ರದೇಶದ ಕಂಚಿನಯುಗದ ಸಂಸ್ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತವೆ.

## ಗೀರು ಚಿತ್ರಗಳು

ಈ ಕಾಲದ ಮಣ್ಣಿನ ಪಾತ್ರೆಗಳನ್ನು ಕೆಲವೊಂದು ವಿಶಿಷ್ಟ ಕಾರ್ಯಕ್ಕೆ ಉಪಯೋಗಿಸುತ್ತಿದ್ದಲ್ಲಿ ಅವುಗಳನ್ನು ಮತ್ತೆ ಬೇರೆ ಬೇರೆ ಕ್ರಮದಲ್ಲಿ ಅಲಂಕರಿಸಲಾಗುತ್ತಿತ್ತು. ಪಾತ್ರೆಗಳು ಇನ್ನೂ ಹಸಿ ಇರುವಾಗಲೇ ಚೂಪಾದ ಮರದ ಕಡ್ಡಿಯಿಂದಲೋ ಅಥವಾ ಲೋಹದ ತಂತಿಯಿಂದಲೋ ಪಾತ್ರೆಗಳ ಮೇಲ್ಭಾಗದ ಹೊರಮೈ ಮೇಲೆ ಕೆಲವು ವಿಧದ ರೇಖಾಚಿತ್ರಗಳನ್ನು ಗೀರುವುದು ಒಂದು ಪ್ರಕಾರ. ಓರೆಯಾದ ಸಮಾನಾಂತರ ರೇಖೆಗಳು ಕೆಲವೊಮ್ಮೆ ಇವುಗಳ ಮಧ್ಯೆ ಕಚ್ಚು ಗೆರೆಗಳು ಇಲ್ಲವೆ ಸಮಾನ ಅಂತರದಲ್ಲಿ ತುಂಡು ಗೆರೆಗಳು ಇಲ್ಲವೆ ಬೆನ್ನೆಲುಬು ರೀತಿಯಲ್ಲಿ ಎರಡು ಸಾಲು ವಿರುದ್ಧ ದಿಕ್ಕಿನ ಸಮಾನಾಂತರ ಓರೆ ಗೆರೆಗಳು ಹೀಗೆ ಗೀರು ಚಿತ್ರಗಳು ಮಣ್ಣಿನ ಪಾತ್ರೆಗಳಿಗೆ ಅಲಂಕಾರಪ್ರಾಯವಾಗಿವೆ. ಈ ಪದ್ಧತಿ ಇಂದಿಗೂ ಬೇರೆ ರೀತಿಯಾಗಿ ಉಳಿದು ಬಂದಿದೆ. ಸಾಮಾನ್ಯವಾಗಿ ಗೆರೆಗಳು ಸ್ವಲ್ಪ ದಪ್ಪ ಹಾಗೂ ಆಳವಾಗಿರುತ್ತವೆ.

ಇನ್ನೊಂದು ಪ್ರಕಾರವೆಂದರೆ, ಸೂಜಿಯಂಥ ಉಪಕರಣದಿಂದ ಚುಚ್ಚಿ ಚುಚ್ಚಿ ವಿವಿಧ ಆಕಾರಗಳನ್ನು ಬಿಡಿಸುವುದು. ತೆಕ್ಕಲಕೋಟೆಯ ನೂತನ ಶಿಲಾಯುಗ ಸಂಸ್ಕೃತಿಯ ಒಂದು ಬೂದುವರ್ಣದ ಮಣ್ಣಿನ ಪಾತ್ರೆಯ ಮುಚ್ಚಳದ ಮೇಲೆ ಜಿಂಕೆ, ಹಾವು, ಗೂಳಿ ಮೊದಲಾದ ಪ್ರಾಣಿಗಳ ಚಿತ್ರಗಳಿವೆ. ಈ ಪ್ರಕಾರದ ಚಿತ್ರಕ್ಕೆ ಇದುವರೆಗೂ ಇದು ಒಂದೇ ಉದಾಹರಣೆ.

ಇನ್ನು ದೊಡ್ಡ ದೊಡ್ಡ ಗುಡಾಣ ಹಾಗೂ ಬಾನಿಗಳಂಥ ದಪ್ಪ ಪಾತ್ರೆಗಳ ಮೇಲೆ ಹಾಗೂ ಪುಷ್ಪಕುಂಡದಂಥ ಪಾತ್ರೆಗಳ ಅಂಚಿನ ತುದಿಯನ್ನು ಬೆರಳುಗಳಿಂದ ಉದ್ದಕ್ಕೂ ಒತ್ತಿ ಒತ್ತಿ ಅಥವಾ ಮಣ್ಣಿನ ಉದ್ದನೆಯ ಮಾಲೆಯನ್ನು ಮಾಡಿ ಅದನ್ನು ಪಾತ್ರೆಯ ಕಂಠದಿಂದ ಸ್ವಲ್ಪ ಕೆಳಗೆ ಭುಜದ

ಮೇಲ ಸುತ್ತಲೂ ಮೆತ್ತಿ, ಮಾಲೆಯನ್ನು ಮತ್ತೆ ಬೆರಳುಗಳಿಂದ ಒತ್ತಿ ಒತ್ತಿ ಅಲಂಕರಿಸಲಾಗುತ್ತಿತ್ತು. ಈ ಕ್ರಮದಿಂದ ಮಣಿಗಳ ಸರ ಹಾಕಿದಂತೆ ಕಾಣುತ್ತದೆ. ಇಂದಿಗೂ ಪೂಜೆಗೆ ಕಲಶವನ್ನಿಟ್ಟಾಗ ಅದನ್ನು ಚಿನ್ನದ ಸರದಿಂದ, ದೊಡ್ಡ ದೊಡ್ಡ ಧಾನ್ಯ ಪಾತ್ರೆಗಳನ್ನು ಹೂವಿನ ಮಾಲೆಯಿಂದ ಅಲಂಕರಿಸುವುದನ್ನು ನಾವು ನೋಡುತ್ತೇವೆ. ಒಂದೊಂದು ವೇಳೆ ಈ ಮಾಲೆಗಳ ಎರಡೂ ತುದಿಗಳನ್ನು ಸೇರಿಸುವುದರ ಬದಲು ಅವುಗಳನ್ನು ವಿರುದ್ಧ ದಿಕ್ಕಿನಲ್ಲಿ ತಿರುಗಿಸಿ ಅಂಟಿಸುವುದು ಮತ್ತು ಇವೆರಡೂ ಭಾಗಗಳಲ್ಲಿ ಸ್ತ್ರೀಯ ಸ್ತನದಾಕೃತಿಯಲ್ಲಿ ಎರಡು ಮಣ್ಣಿನ ಗಟ್ಟಿಯನ್ನು ಅಂಟಿಸುವುದು. ಸಾಮಾನ್ಯವಾಗ ಇಂಥ ಗುಡಾಣಗಳನ್ನು ಶವ ಸಂಸ್ಕಾರಕ್ಕೆ ಉಪಯೋ ಸಲಾಗುತ್ತಿತ್ತು. ಶವಕುಣಿಗಳಲ್ಲಿ ಇಂಥ ಅಲಂಕೃತ ಪಾತ್ರೆಗಳನ್ನಿಟ್ಟು ಅದರೊಳಗೆ ಶವವನ್ನೋ ಅಥವಾ ದಹನ ಕ್ರಿಯೆ ನಂತರ ಸಂಗ್ರಹಿಸಿದ ಅಸ್ಥಿ ಅವಶೇಷಗಳನ್ನೋ ಇಟ್ಟು ಜೊತೆಗೆ ಆಹಾರ ಪಾನೀಯಗಳಿಗೋಸ್ಕರ ಕೆಲವು ಪಾತ್ರೆಗಳನ್ನು, ಅಪರೂಪವಾಗಿ ಆಭರಣಗಳನ್ನು ಅಥವಾ ಆಯುಧೋಪಕರಣಗಳನ್ನು ಕಟ್ಟಳೆಗಳಿಗನುಸಾರವಾಗಿ ಇಟ್ಟು ಶವಕುಣಿಯನ್ನು ಮುಚ್ಚಲಾಗುತ್ತಿತ್ತು. ಮಾನವ ಶಾಸ್ತ್ರಜ್ಞರು ಈ ವಿಶಿಷ್ಟ ಅಸ್ಥಿ ಪಾತ್ರೆಯ ಅಲಂಕರಣವನ್ನು ಈ ರೀತಿ ಅರ್ಥೈಸುತ್ತಾರೆ. ಸಾಮಾನ್ಯವಾಗಿ ಗುಡಾಣದ ಹೊಟ್ಟೆ ಅಳತೆ ಮೀರಿ ಉಬ್ಬಿರುತ್ತೆ. ಇದನ್ನು ಮತ್ತು ಅಲಂಕರಣವನ್ನು ಗಮನಕ್ಕೆ ತೆಗೆದುಕೊಂಡಾಗ ಈ ಪಾತ್ರೆ ಸಾಂಕೇತಿಕವಾಗಿ ಗರ್ಭಿಣಿ ಸ್ತ್ರೀಯನ್ನು ಸೂಚಿಸುತ್ತದೆ. ಅಂದರೆ ಮರಣಹೊಂದಿದವನು ಭೂತಾಯಿ ಗರ್ಭವನ್ನು ಮತ್ತೆ ಸೇರಿದಂತೆ. ಆದ್ದರಿಂದ ಇಂಥ ಕೆಲವು ತುಂಬಾ ಅರ್ಥಗರ್ಭಿತವಾಗಿರುತ್ತವೆ. ಇದೇ ರೀತಿ ಕುಂಡಗಳ ಬಾಯಿ ಅಂಚುಗಳನ್ನು ಹೀಗೆ ಅಲಂಕರಿಸಲಾಗುತ್ತಿತ್ತು.

## ಸುಡಾವೆ ಮಣ್ಣಿನ ಗೊಂಬೆಗಳು

### *ಪಶು–ಪಕ್ಷಿಗಳ ಆಕೃತಿಗಳು*

ಬಹಳ ಹಿಂದೆಯೇ ಕುಪ್ಪಗಲ್ಲಿನಲ್ಲಿ ಸಿಕ್ಕ ಒಂದು ಮಣ್ಣಿನ ಗೊಂಬೆಯ ಬಗ್ಗೆ ಬ್ರೂಸ್ ಫುಟ್ ಅವರು ವರದಿ ಮಾಡಿದ್ದಾರೆ. ಬ್ರಹ್ಮಗಿರಿ, ಪಿಕ್ಲಿಹಾಳ, ಸಂಗನಕಲ್ಲು, ತೆಕ್ಕಲಕೋಟೆ ಮೊದಲಾದ ಪ್ರಾಚೀನ ನೆಲೆಗಳ ಉತ್ಖನನದಲ್ಲಿ ನೂತನ ಶಿಲಾಯುಗ ಅಥವಾ ಶಿಲಾತಾಮ್ರಯುಗ ಜನಜೀವನದ ನಿತ್ಯೋಪಯೋಗಿ ವಸ್ತುಗಳ ಅವಶೇಷಗಳೊಡನೆ ಕೆಲವು ಸುಡಾವೆ ಮಣ್ಣಿನ ಗೊಂಬೆಗಳೂ ದೊರೆತಿವೆ. ಮತ್ತು ಕೃಷ್ಣಾ ನದಿದಂಡೆಯ ಮೇಲಿರುವ ಹಾರೋಗೇರಿಯಲ್ಲಿ (ಅಥಣಿ ತಾಲ್ಲೂಕು ಬೆಳಗಾಂವ ಜಿಲ್ಲೆ) ಡೋಣಿ ನದಿ ದಂಡೆಯ ಮೇಲಿರುವ ಭೋರಗಿಯಲ್ಲಿ (ಇಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ) ಯ ಇಂಥ ಒಂದೊಂದು ಗೊಂಬೆಯು ಸಿಕ್ಕವು.

ಸಾಮಾನ್ಯವಾಗಿ ಈ ಗೊಂಬೆಗಳು ದನ, ಎತ್ತು, ಕುರಿ, ಪಕ್ಷಿ ಮತ್ತು ಮನುಷ್ಯ ಇವುಗಳ ಪ್ರತಿಕೃತಿಗಳಾಗಿವೆ. ಇವುಗಳಲ್ಲಿ ಪ್ರಾಣಿ ಗೊಂಬೆಗಳೇ ಹೆಚ್ಚು. ಇವು ಕೈಯಿಂದ ಮಾಡಿದ ಗಟ್ಟಿ ಗೊಂಬೆಗಳು, ಮೈಮಾಟವು ಸಾಮಾನ್ಯವಾಗಿ ಆಕರ್ಷಕವಾಗಿರುತ್ತದೆ. ಆದರೆ ಬಾಯಿ, ಕಣ್ಣು, ಕಿವಿ ಮೊದಲಾದ ಮುಖ ಲಕ್ಷಣಗಳು ಅಷ್ಟೇನು ಸ್ಪಷ್ಟವಾಗಿರುವುದಿಲ್ಲ. ಕಣ್ಣುಗಳನ್ನು ಸಣ್ಣ ವೃತ್ತಗಳಿಂದ ಸೂಚಿಸಲಾಗಿರುತ್ತದೆ. ಕೆಳಮುಖ, ಸಪೂರವಾದ ಸಣ್ಣ ಸಣ್ಣ ದಿಂಡುಗಳು, ಕಾಲುಗಳು. ದನ ಇಲ್ಲವೆ ಗೂಳಿಗಳ ಗೊಂಬೆಗಳೇ ಹೆಚ್ಚು. ಇವುಗಳನ್ನು ಸೃಷ್ಟಿಸಿದ ಜನರ ಆರ್ಥಿಕ ಸ್ಥಿತಿಯನ್ನು ಪರಿಶೀಲಿಸಿದಾಗ ಈ ಗೊಂಬೆಗಳು ಹೆಚ್ಚಿರುವುದು ಅರ್ಥವಾಗುತ್ತದೆ. ಈ ಜನರು ಹೆಚ್ಚಾಗಿ ಬೇಸಾಯಗಾರರು. ಆದ್ದರಿಂದ ಇವರು ಎತ್ತು, ದನಗಳನ್ನು ಸಾಕುತ್ತಿದ್ದರು. ಹಳ್ಳಿಗಳಲ್ಲಿ ಇದು ಇಂದಿಗೂ ಹೀಗೆ. ಗೂಳಿಗಳ ಗೊಂಬೆಗಳಲ್ಲಿ ಅವುಗಳ ಬಲಿಷ್ಠತೆ ಮತ್ತು ಠೀವಿಯನ್ನು ಪುಷ್ಟವಾದ ಶರೀರ ಮತ್ತು ಸೊಗಸಾಗಿ ಬಿಡಿಸಿದ ಇಣಿಗಳಿಂದ ಮನಮುಟ್ಟುವಂತೆ ಸೂಚಿಸಲಾಗಿದೆ. ಇಂಥ ಗೊಂಬೆಗಳು ತೆಕ್ಕಲಕೋಟೆ, ಪಿಕ್ಲಿಹಾಳ, ಸಂಗನಕಲ್ಲು ಮೊದಲಾದ ಶಿಲಾ–ತಾಮ್ರಯುಗ ನೆಲೆಗಳ ಉತ್ಖನನದಲ್ಲಿ ಸಿಕ್ಕಿವೆ. ಸಂಗನಕಲ್ಲಿನ ನಾಲ್ಕು ಗೊಂಬೆಗಳಲ್ಲಿ ಒಂದರ ಮೈ ಮಾಟವು ಅತ್ಯಂತ ಚೆಲುವಾಗಿದೆ. ದುರದೃಷ್ಟವಶಾತ್ ಇದರ ತಲೆಯ ಭಾಗ ಮುರಿದು ಹೋಗಿದೆ. ನೀಳವಾದ ಮುಂಡ. ಹಿಂದಿನ ಕಾಲುಗಳ ಆಕಾರವು ಆಕರ್ಷಕ. ಬಾಲ ಸ್ವಲ್ಪ ಮೇಲಕ್ಕೆತ್ತಿದಂತಿದೆ. ಕೆಲವದರಲ್ಲಿ ಇಣಿಯನ್ನು ತೋರಿಸಿರುವುದಿಲ್ಲ. ಕೋಡುಗಳು ಸಾಮಾನ್ಯವಾಗಿ ಕವಲೊಡೆದ ಕೊಂಬೆಯಂತಿವೆ. ಇಂಥ ಗೊಂಬೆಗಳು ಒಂದೇ ಮಾದರಿಯದಾಗಿರುವುದಿಲ್ಲ. ಸಂಗನಕಲ್ಲಿನ ಮತ್ತೆರಡು ಗೊಂಬೆಗಳಲ್ಲಿ ಮುಂಡವು ಪ್ರಮಾಣ ಬದ್ಧವಾಗಿದ್ದು, ಸಣ್ಣ ಮತ್ತು ದಪ್ಪ ಕೋಡುಗಳಿವೆ. ಪ್ರಾಯಶಃ ಇವುಗಳನ್ನು ಮಾಡಿದ ಕುಶಲಕರ್ಮಿಯು ಈ ಪ್ರಾಣಿಗಳ ವೈವಿಧ್ಯವನ್ನು ಚೆನ್ನಾಗಿ ಗಮನಿಸಿರಬೇಕು. ಪಿಕ್ಲಿಹಾಳದ ಇಂಥ ಎತ್ತು, ದನ, ಪ್ರಾಣಿಗಳ ಗೊಂಬೆಗಳಲ್ಲಿ ಕೋಡುಗಳು ವಿಶೇಷವಾಗಿ ಉದ್ದವಾಗಿರುತ್ತವೆ. ಆ ನೆಲೆಯಲ್ಲಿರುವ ಗವಿವರ್ಣ ಚಿತ್ರಗಳಲ್ಲಿಯ ಗೂಳಿಗಳಲ್ಲಿ ಇದೇ ಲಕ್ಷಣವಿದೆ. ಆದ್ದರಿಂದ ಈ ಗೊಂಬೆಗಳ ಸಹಾಯದಿಂದ ಆ ವರ್ಣಚಿತ್ರಗಳ ಕಾಲಮಾನವನ್ನು ಸ್ವಲ್ಪ ಹೆಚ್ಚುಕಡಿಮೆ ತಿಳಿದುಕೊಳ್ಳಲು ಸಾಧ್ಯವಾಗುವುದು. ಶರೀರದ ಭಾಗಗಳು ಅಂದರೆ ಮುಂಡ, ಕಾಲುಗಳು ಮತ್ತು ಕುತ್ತಿಗೆ ಸೇರಿದಂತೆ ಉದ್ದ ಮತ್ತು ಸಪೂರ ಹಾಗೂ ದುಂಡವಾಗಿರುತ್ತವೆ. ಇಲ್ಲಿ ಇದೊಂದು ವಿಶಿಷ್ಟ ಮಾದರಿ. ಒಂದೊಂದು ವೇಳೆ ಎರಡೂ ಕಾಲುಗಳನ್ನು ಒಟ್ಟಾಗಿ ಜೋಡಿಸಿ ಮೂಡಿಸಿದ್ದೂ ಇದೆ.

ಇವುಗಳಲ್ಲಿ ಪಿಕ್ಲಿಹಾಳದ ಒಂದು ಗೂಳಿ ಮಾತ್ರ ಅತ್ಯಂತ ಉತ್ತಮ ಕೃತಿ. ಆಕರ್ಷಕ ದೃಢಕಾಯ, ಎದ್ದು ಕಾಣುವ ಇಣಿ, ಪುಷ್ಟವಾದ ಕಾಲುಗಳು, ಸಣ್ಣ ನಡುವು ಮತ್ತು ಸಹಜವಾಗಿ ಇಳಿಬಿಟ್ಟ ಬಾಲ. ಒಟ್ಟಿನಲ್ಲಿ ಇದು ಮಣ್ಣಿನ ಗೊಂಬೆಗಳಲ್ಲಿ ಒಂದು ಶ್ರೇಷ್ಠಕೃತಿ. ಹರಪ್ಪಾ

ಾಗರಿಕತೆಯ ಮುದ್ರಿಕೆಗಳಲ್ಲಿ ಗೂಳಿಯ ಉಬ್ಬು ಚಿತ್ರವು ತುಂಬ ಸುಂದರವಾಗಿರುತ್ತದೆ. ಅದು ಜನರಿಗೆ ಅಚ್ಚುಮೆಚ್ಚಿನ ಪ್ರಾಣವೆಂಬುವಷ್ಟು ಈ ಗೊಂಬೆಯು ಆ ನಾಗರಿಕತೆಯ ಇಂಥ ಲಾಕೃತಿಗೆ ಸರಿಸಮಾನವಾಗಿದೆ. ಸಂಗನಕಲ್ಲಿನ ಗೊಂಬೆಗಳಲ್ಲಿ ಪಕ್ಷಿಯೊಂದು ಇದೆ. ಇದರ ತ್ತಿಗೆ ಸ್ವಲ್ಪ ಮೇಲಕ್ಕೆತ್ತಿದೆ. ಬಹುಶಃ ಇದು ಪಾರಿವಾಳದ ಪ್ರತಿಕೃತಿಯಿರಬಹುದು.

ಇವೆಲ್ಲವೂ ಗಟ್ಟಿ ಗೊಂಬೆಗಳು. ಯಾವುದೇ ಯಾಂತ್ರಿಕ ಸಾಧನವನ್ನು ಉಪಯೋಗಿಸದೆ, ಾಳಿಸಿ ಸಿದ್ಧಮಾಡಿದ ಕಲಸು ಮಣ್ಣಿನ ಮುದ್ದೆಯನ್ನು ಕೈಗಳಿಂದಲೇ ರೂಪಿಸಿ, ತೀಡಿ ತಿದ್ದಿ ಇಂಥ ೊಂಬೆಗಳನ್ನು ಮಾಡಿರುವಂತೆ ತೋರುತ್ತದೆ. ಕಾಲುಗಳನ್ನು, ಕೋಡುಗಳನ್ನು ಪ್ರತ್ಯೇಕ ಮಾಡಿ ರೀರಕ್ಕೆ ಸರಿಯಾಗಿ ಜೋಡಿಸಿದೆ. ನಂತರ ಅವುಗಳಿಗೆ ಸರಿ ಹೋಗುವ ಲೇಪನವನ್ನು ಬಳಿದು ಂತರ ಆವಿಗೆಯಲ್ಲಿ ಸುಡಲಾಗಿದೆ.

## ಮನುಷ್ಯಾಕೃತಿ

ಈ ಆಕೃತಿಯೂ ಕೂಡಾ ಸಾಮಾನ್ಯವಾಗಿ ಬಾಹ್ಯ ಸ್ವರೂಪದ ರೂಪಣವೇ ಹೊರತು ಅಂಗಾಂಗಳ ಪ್ರತಿಯೊಂದು ಭಾಗವನ್ನು ಮತ್ತು ಅವುಗಳ ಲಕ್ಷಣಗಳನ್ನು ಮೂಡಿಸಿರುವುದಿಲ್ಲ. ಕ್ಕಲಕೋಟೆ ಮತ್ತು ಪಿಕ್ಲಿಹಾಳದಲ್ಲಿ ದೊರೆತ ಇಂಥ ಗೊಂಬೆಗಳ ಕೈಕಾಲುಗಳು ಮತ್ತು ತಲೆ ುರಿದುಹೋಗಿದೆ. ಆದರೆ ಮುಂಡದ ಭಾಗವು ಸ್ವಲ್ಪ ದುಂಡಾಗಿದ್ದು, ಮುರಿದು ಹೋಗಿದೆ ನ್ನಲಾದ ತೋಳಿನ ತುದಿಯು ತೀಡಿ ತಿದ್ದಿದಂತಿದೆ. ಆದ್ದರಿಂದ ಇವು ನಿಜವಾಗಿಯೂ ುನುಷ್ಯಾಕೃತಿಗಳೆ ಅಥವಾ ಗೂಳಿಗಳಿರಬಹುದೆ ಎಂಬ ಅನುಮಾನವಿದೆ. ಏಕೆಂದರೆ ಾರೋಗೇರಿಯಲ್ಲಿ ದೊರೆತ ಗೊಂಬೆಯು ಇವುಗಳಿಗೆ ಹೋಲುತ್ತಿದ್ದು, ಅದಕ್ಕೆ ಸ್ಪಷ್ಟ ಣಿಯುಂಟು ಮತ್ತು ಮುಂದಿನ ಕಾಲುಗಳು ಇವೆ.

ಮೇಲೆ ವಿವರಿಸಿದ ಗೊಂಬೆಗಳು ಪ್ರಕೃತಿಯ ಪಶು, ಪಕ್ಷಿಗಳ ಕಲಾಕೃತಿಗಳಾಗಿದ್ದರೆ, ತ್ಯೋಪಯೋಗಿ ಕೆಲವು ಮೃತ್ ಪಾತ್ರೆಗಳ ಆಕಾರಗಳಲ್ಲಿ ಈ ಜನರು ತಮ್ಮ ಸೌಂದರ್ಯ ್ರಜ್ಞೆಯನ್ನು ತೋರಿದ್ದಾರೆ. ಉದಾಹರಣೆಗೆ, ಗಡಿಗೆಯ ಮುಚ್ಚಳಗಳು. ಈ ಮುಚ್ಚಳಗಳು, ಂಡಿಕೆಗಳು ವಿವಿಧ ಪ್ರಕಾರಗಳಲ್ಲಿರುತ್ತವೆ. ಅವು ಮುಚ್ಚಳವನ್ನು ಮೇಲಕ್ಕೆತ್ತಲು, ಹಿಡಿಯಲು ರಿಯಾಗಿರಬೇಕು ಮತ್ತು ನೋಡಲು ಅಂದವಾಗಿ ಕಾಣಬೇಕು. □

# 9. ಸಮಾರೋ

ಇದುವರೆಗೂ ಕರ್ನಾಟಕ ಪ್ರದೇಶದಲ್ಲಿ ಪ್ರಾಚೀನ ಜನರ ಕಲಾವಂತಿಕೆಯ ಹೆಗ್ಗುರುತುಗ
ಶೋಧನೆಗಳನ್ನು ತಕ್ಕಮಟ್ಟಿಗೆ ವಿಮರ್ಶಾತ್ಮಕವಾಗಿ ಪರಿಶೀಲನೆ ಮಾಡಿದೆವು. ಸಾಮಾನ್ಯವಾ
ಭಾರತದ ವಿಶೇಷವಾಗಿ ಕರ್ನಾಟಕದ ಇತಿಹಾಸ ಪರಿಚಯವುಳ್ಳವರಿಗೆ ಅಥವಾ ಅಜಂತ
ಬಾದಾಮಿ ಮೊದಲಾದ ಅಥವಾ ವರ್ಣಚಿತ್ರ ಗ್ಯಾಲರಿಗಳುಳ್ಳ ವಸ್ತುಸಂಗ್ರಹಾಲಯಗಳನ
ನೋಡಿದವರಿಗೆ ಕ್ರಿ. ಪೂ. 2–1ನೇ ಶತಮಾನದಿಂದ ಗುಪ್ತ–ವಾಕಾಟಕ (ಸು. ಕ್ರಿ. ಶ. 4–6ನ
ಶತಮಾನ ಪಲ್ಲವ–ಚೋಳ, ಮೊಗಲ್–ವಿಜಯ ನಗರೋತ್ತರ ಕಾಲ, ಇನ್ನೂ ಸ್ವಲ್ಪ ಮುಂ
ಹೋದಲ್ಲಿ ಭಾರತೀಯ–ಐರೋಪ್ಯ ರಾಜಾ ರವಿವರ್ಮನ ಕಾಲದ ವರೆಗಿನ ಶಿಷ್ಟ ಸಂಪ್ರದಾಯ
ಪ್ರಬುದ್ಧ ವರ್ಣ ಚಿತ್ರಕಲೆಯ ಕೆಲವೊಂದು ದೃಷ್ಟಾಂತಗಳು ಗೊತ್ತು. ಆದರೆ ಈ ಪರಂಪರೆ
ಹಿಂದೆ ಸಾವಿರಾರು ವರ್ಷಗಳಿಂದ ಬೆಳೆದು ಬಂದ, ಯಾವುದೇ ಶಾಸ್ತ್ರ ಗ್ರಂಥಗಳ, ತರಬೇ
ಕೊಡುವಂಥ ಗುರುವರ್ಗ ಕಲಾಶಾಲೆಗಳು ಹುಟ್ಟಿರದ ಕಾಲದಲ್ಲಿ ತಮ್ಮ ತಮ್ಮ ಮನೆಯಲ್ಲಿ
ಅಥವಾ ನಿಸರ್ಗದ ಆಸರೆಗಳಲ್ಲಿ ಸಹಜವಾಗಿ ಬೆಳೆಸಿಕೊಂಡು ಬಂದ ಜನ ಸಾಮಾನ್ಯರ ಸರ
ವೈವಿಧ್ಯಮಯ, ವಿಪುಲ ಕಲಾಸಂಪತ್ತು ಇರುವುದು ಈಗೀಗ ತಿಳಿದು ಬರುತ್ತಿದೆ.
ಪರಂಪರೆಯೇ ತರುವಾಯ ಇತಿಹಾಸದ ಕಾಲದ ಶಿಷ್ಟ ಸಂಪ್ರದಾಯದ ಕಲೆಗೆ ನಾಂದಿಯ
ಬುನಾದಿಯೂ ಆಗಿದೆ. ಕನಿಷ್ಠ ಸೂಕ್ಷ್ಮ ಶಿಲಾಯುಗದಿಂದ ಆದಿ ಇತಿಹಾಸ ಕಾಲದವರೆಗೆ
ಸುಮಾರು 10–15 ಸಾವಿರ ವರ್ಷಗಳಲ್ಲಿ ಕರ್ನಾಟಕದ ಉತ್ತರ ಭಾಗದಲ್ಲಿ ಅದೇ
ಪ್ರಕಾರಗಳಲ್ಲಿ ಈ ಕಲಾ ಸಿರಿವಂತಿಕೆಯು ಆಶ್ಚರ್ಯಕರವಾಗಿ ಬೆಳೆದುಬಂದಿದೆ! ನಿಸರ್ಗದ
ದೊರೆಯುವ ಆಸರೆ ಮತ್ತು ವಸ್ತುಗಳನ್ನು ಅದೆಷ್ಟು ಚೆನ್ನಾಗಿ ಉಪಯೋಗಿಸಿಕೊಂಡು ತ
ಕಲಾಭಿಜ್ಞತೆಯನ್ನು ತೋರಿಸಿದ್ದಾನೆ ! ಇತಿಹಾಸ ಕಾಲದಲ್ಲಿ ಭಾರತದ ಬೇರೆ ಬೇರೆ ಪ್ರದೇಶಗಳ
ಬೆಳೆದುಬಂದ ದೇವಾಲಯ ವಾಸ್ತುಶಿಲ್ಪದ ವಿವಿಧ ಮಾದರಿಗಳ ಮೂಲ ಸ್ವರೂಪಗಳ
ಒಂದೆಡೆಯಲ್ಲಿ ನೋಡಬಹುದಾದ ಜಗತ್ಪ್ರಸಿದ್ಧ (ರಾಮದುರ್ಗ)–ಬಾದಾಮಿ–ಐಹೊಳೆ ಪ್ರದೇಶ
ದಕ್ಷಿಣ ಭಾರತದ ಅತೀ ಪ್ರಾಚೀನ ಪ್ರಾಗಿತಿಹಾಸ ಕಾಲದ ವರ್ಣ ಚಿತ್ರಕಲೆಯ ಆಗರವಾಗಿರುವು
ಸೋಜಿಗವೇ ಸರಿ. ಸಮಕಾಲೀನ ವರ್ಣ ಚಿತ್ರಕಲೆಯಲ್ಲಿ ನೈಜ ಪ್ರತಿರೂಪಗಳಿಗೆ ಅಷ್ಟೇನ
ಸ್ಥಾನವಿಲ್ಲ. ಬದಲಾಗಿ ಪ್ರತಿಯೊಬ್ಬ ಕಲಾವಿದನೂ ವಸ್ತುವಿಗೆ, ವ್ಯಕ್ತಿ ಚಿತ್ರಕ್ಕೆ ಅಥವಾ ಸನ್ನಿವೇ

ತನ್ನದೇ ಆದ ವಿಶಿಷ್ಟ ರೂಪವನ್ನು ಕಲ್ಪಿಸಿಕೊಂಡು ಆದರ ಅಭಿವ್ಯಕ್ತಿಯಲ್ಲಿಯೂ ವಿಶಿಷ್ಟ ತಂತ್ರ ಅಥವಾ ವರ್ಣ ಸಂಯೋಜನೆಯನ್ನು ಬಳಸಿ ತನ್ನದೇ ಒಂದು ಅಪರೂಪದ ಸೃಷ್ಟಿಯನ್ನು ಮಾಡುತ್ತಾನೆ. ಇದು ಯಾವುದೇ ಪರಂಪರೆಗೆ ಅಂಟಿಕೊಂಡಿರುವುದಿಲ್ಲ. ಆದ್ದರಿಂದ ಇವುಗಳನ್ನು ನೋಡಿದಾಗ ಅರ್ಥಮಾಡಿಕೊಳ್ಳಲು ಸ್ವಲ್ಪ ಸಮಯವೇ ಬೇಕಾಗುತ್ತದೆ. ಅದರಲ್ಲಡಗಿದ ಅವನ ಪ್ರತಿಭೆಯ ದರ್ಶನವಾದಾಗ ಒಂದು ಕ್ಷಣ ಹೃದಯ ಪುಳಕಿತಗೊಳ್ಳುತ್ತದೆ. ಬಾದಾಮಿ–ಹೊಳೆ ಪ್ರದೇಶದಲ್ಲಿಯ ಸೂಕ್ಷ್ಮ ಶಿಲಾಯುಗದ ಮನುಷ್ಯಾಕೃತಿಗಳು ಈ ಸಮಕಾಲೀನ ಕಲೆಯ ಒಂದು ಪೂರ್ವಭಾವಿ ಹಂತವೇನೋ ಎನ್ನುವಷ್ಟು ವೈಶಿಷ್ಟ್ಯಮಯವಾಗಿದೆ. ಸಣ್ಣ ತಲೆ, ಮಿತಿ ಮೀರಿದ ಅತಿ ಉದ್ದದ ಮುಂಡಭಾಗ, ಚಲನೆಯಿಂದ ಕೂಡಿದ ಕೈಕಾಲುಗಳು, ಬಾಗು–ಬಳಕು ಸ್ಥೂಲ ಸೂಕ್ಷ್ಮ ರೇಖೆಗಳ ಬಳಕೆ ಮೊದಲಾದ ಲಕ್ಷಣಗಳು ಇವು ಯಾವುದು ನೈಜತೆಯಿಂದ ಕೂಡಿರದೆ, ಅರ್ಥಪೂರ್ಣ ಸೂಕ್ಷ್ಮ ಚೆಲುವಿನ ಸಂಕೇತಾಕೃತಿಗಳು. ಬರಬರುತ್ತಾ ನೂತನ–ಬೃಹತ್ ಶಿಲಾಯುಗ ಹಂತದಲ್ಲಿ ಅವು ಸಾಮಾಜಿಕವಾಗುತ್ತ ನೈಜ ಪ್ರತಿಕೃತಿ ರೂಪಣದಲ್ಲಿ ಹೆಚ್ಚು ಒಲವು ತೋರಿಸಿರುವುದನ್ನು ಗುಲ್ಬರ್ಗಾ–ರಾಯಚೂರು–ಬಳ್ಳಾರಿ ಪ್ರದೇಶದಲ್ಲಿಯ ಚಿತ್ರಗಳಲ್ಲಿ ಕಾಣಬಹುದು. ಜೊತೆಗೆ ಬಂಡೆಯ ಮೇಲೆ ಕುಟ್ಟಿ ತೆಗೆಯುವ ಅಥವಾ ಚೂಪಾದ ಗಟ್ಟಿಕಲ್ಲಿನ ಲೋಹದ ಉಳಿಯಿಂದ ಮೂಡಿಸಿದ ಗೀರು ಚಿತ್ರ ಪ್ರಕಾರಗಳು ಬೆಳೆದವು. ಈ ಚಿತ್ರಕಲೆ ನಿಸರ್ಗದ ಪರಿಸರದಲ್ಲಿ ಮನುಷ್ಯ ಹಾಗೂ ತನ್ನ ಪರಿಸರದ ಹಾಗೂ ತನಗೆ ಬೇಕಾದ ಪ್ರಾಣಿಗಳು ಅವುಗಳಲ್ಲೂ ವಿಶೇಷವಾಗಿ ಗೂಳಿ, ಚಿಗರೆ, ಒಗಟಿನ ರೇಖಾಕೃತಿ ಇವಿಷ್ಟೇ ಮೊದಲಿನಿಂದಲೂ ಸಾಮಾನ್ಯವಾಗಿ ಈ ಜನರ ಚಿತ್ರ ಕಲೆಯ ವಸ್ತು. ಕ್ರಮೇಣ ಸಾಮಾಜಿಕವಾದ ಸಮೂಹ ನೃತ್ಯ, ಬೇಟೆ, ಶವಸಂಸ್ಕಾರ ಮೊದಲಾದ ವಿಷಯಗಳು ಇವನ ಆಸಕ್ತಿಯನ್ನು ಕೆರಳಿಸಿವೆ. ಈ ಚಿತ್ರಕಲೆಯು ನಿಸರ್ಗದಲ್ಲಿ ಬೆಳೆದರೆ, ಮನೆಯಲ್ಲಿ ವಿವಿಧ ಪ್ರಕಾರದ ಕರಕುಶಲತೆಯು ಬೆಳೆಯಿತು. ಮಣ್ಣಿನ ಪಾತ್ರೆಗಳನ್ನು ಸುಂದರವಾಗಿಸಲು ಅವುಗಳ ಮೇಲೆ ಬಣ್ಣ ಬಣ್ಣದ ರೇಖಾಕೃತಿಗಳು, ತಮ್ಮ ಕಟ್ಟಳೆಗಳಿಗನುಗುಣವಾಗಿ ಮಣ್ಣಿನ, ಎಲುಬಿನ ಗೊಂಬೆಗಳು ಮೊದಲಾದವು ಸೃಷ್ಟಿಯಾದವು.

ಪ್ರಾಗೈತಿಹಾಸಿಕ ಚಿತ್ರಗಳು ತಮ್ಮ ದೈನಂದಿನ ಜೀವನದ ಆರ್ಥಿಕ ಸಫಲತೆ, ಅಂದರೆ ತಮಗೆ ಆಹಾರವಾದ ಪ್ರಾಣಿಗಳ ಅಭಿವೃದ್ಧಿ,ಇವುಗಳ ಯಶಸ್ವಿ ಬೇಟೆ ಮತ್ತು ತಮ್ಮ ಜನಾಂಗದ ವಂಶಾಭಿವೃದ್ಧಿ ಇವುಗಳ ಮೇಲೆ ಆಧಾರಿತವಾದುವು. ಇಂತಹ ಚಿತ್ರಗಳನ್ನು ಬಿಡಿಸಿದವನು ಆ ಸಮಾಜದ ಸಾಮಾನ್ಯ ವ್ಯಕ್ತಿ. ಮಾಂತ್ರಿಕ ವಿಧಾನದಿಂದಲೂ ಸಮಾಜದ ಅವಶ್ಯಕತೆಗಳನ್ನು ಪೂರೈಸುವ ಪ್ರಯತ್ನ ಅವನದು. ಈ ಕಲಾ ಪರಂಪರೆಯನ್ನು ಅಭಿವೃದ್ಧಿಗೊಳಿಸುತ್ತ ಬಂದ ಬುಡಕಟ್ಟಿಗೆ ಸೇರಿದವನಾಗಲಿ ಅಥವಾ ಅದನ್ನು ಸತತವಾಗಿ ಒಂದು ಕ್ರಮದಲ್ಲಿ ಸಾಧಿಸಿಕೊಂಡು

ಬಂದಂತಹ ವ್ಯಕ್ತಿಯಾಗಲಿ ಅಲ್ಲ. ತಾನು ನೋಡಿದ್ದನ್ನು ಉದ್ದೇಶಕ್ಕನುಗುಣವಾಗಿ ಬಿಡಿಸು ಕುಶಲಗಾರ. ಚಿತ್ರಗಳು ಸಾಂಕೇತಿಕ. ಆದ್ದರಿಂದ ಕೇವಲ ಛಾಯಾ ನಿರೂಪಣಾ ತಂತ್ರವ ಬಳಸಿದ್ದು, ಇದು ಚಾರಿತ್ರಿಕ ಯುಗದಲ್ಲೂ ಮುಂದುವರೆಯಿತು.

ಒಟ್ಟನಲ್ಲಿ, ಇವುಗಳು ತೀರಾ ಸರಳವಾಗಿದ್ದರೂ ವಿನ್ಯಾಸದ ಸಂಕೇತದಲ್ಲಿ ಸತ್ವಶಾಲಿಯಾಗಿ ಭಾವಗಳ ಸಂಕೇತದಲ್ಲಿ ತೀರಾ ಪರಿಣಾಮಕಾರಿಯಾಗಿವೆ. ಈ ಲಕ್ಷಣಗಳೇ ಕಲೆಯ ಜೀವಾ ಮುಂದೆ ಇವನ್ನು ಇತಿಹಾಸಕಾಲದ ಮುರ್ತಿಶಿಲ್ಪ, ವರ್ಣಚಿತ್ರಗಳಲ್ಲಿ ಸುಧಾರಿಸಿದ ತಂತ್ರ ವಿಧಾನಗಳ ಮೂಲಕ ಕಾಣುತ್ತೇವೆ. ಆದ್ದರಿಂದ ಚಿತ್ರಕಲೆಯ ಅತಿ ಮುಖ್ಯವಾದ ಘಟಕಗ ಪರಂಪರೆಯ ಅಡಿಗಲ್ಲನ್ನು ಹಾಕಿದ ಕೀರ್ತಿ ಈ ಪ್ರಾಗೈತಿಹಾಸಿಕ ಮಾನವನಿಗೆ ಖಂಡಿತವಾಗಿಯು ಸಲ್ಲುತ್ತದೆ.


## ಕೃತಜ್ಞತೆ

ಉತ್ತರ ಕರ್ನಾಟಕದಲ್ಲಿಯ ಗವಿ ವರ್ಣ ಮತ್ತು ಬಯಲು ಬಂಡೆ ವರ್ಣಚಿತ್ರಗಳ ನನ್ನ ಶೋಧನೆಗಳಲ್ಲಿ ನೆರವಾದ ಎಲ್ಲ ಸ್ಥಳೀಯ ಪಾಟೀಲರು, ಶಾಲಾ ಮಾಸ್ತರು, ಓಲೆಕಾರರು ಹಾಗೂ ಇತರರಿಗೆ, ನನ್ನ ಲೇಖನದ ಹಸ್ತಪ್ರತಿಯನ್ನು ಪ್ರತಿಮಾಡಿಕೊಟ್ಟ ನನ್ನ ಪತ್ನಿ ಶ್ರೀಮತಿ ಭಾಗ್ಯಲಕ್ಷ್ಮಿಸುಂದರ ಅವರಿಗೆ ಮತ್ತು ನನ್ನ ಪ್ರಾದೇಶಿಕ ಅನ್ವೇಷಣೆಗೆ ಬಹುಮಟ್ಟಿಗೆ ಧನಸಹಾಯ ಮಾಡಿದ ವಿಶ್ವವಿದ್ಯಾಲಯ ಧನಸಹಾಯ ಆಯೋಗಕ್ಕೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

– ಲೇಖಕ

## ಕರ್ನಾಟಕ ಮತ್ತು ಗೋವಾ ಪ್ರದೇಶದಲ್ಲಿಯ ಗವಿಃ ಕಲ್ಲಾಸರೆ ವರ್ಣಚಿತ್ರಗಳ, ಬಯಲು ಬಂಡೆ ಕುಟ್ಟುಃ ಗೀರು ಚಿತ್ರಗಳ ನೆಲೆಗಳು

(ಹ.ಶಿ. – ಹಳೆಶಿಲಾಯುಗ, ಸೂ.ಶಿ. – ಸೂಕ್ಷ್ಮ ಶಿಲಾಯುಗ, ಶಿ.ತಾ. – ಶಿಲಾ ತಾಮ್ರಯುಗ, ಬೃ. ಶಿ. – ಬೃಹತ್ ಶಿಲಾಯುಗ, ಆ. ಇ. – ಆದಿ ಇತಿಹಾಸ ಕಾಲ, ಮ.ಇ. – ಮಧ್ಯಯುಗೀನ ಇತಿಹಾಸ ಕಾಲ. ಬೂ.ಗು.– ಪೂರ್ವಭಾವಿ ಇತಿಹಾಸ ಕಾಲದ ಬೂದಿ ಗುಡ್ಡೆ).

**1. ಗವಿಃ ಕಲ್ಲಾಸರೆ ವರ್ಣಚಿತ್ರಗಳು:**

| | ಸ್ಥಳ | ತಾಲ್ಲೂಕು | ಜಿಲ್ಲೆ | ಪ್ರಾಚೀನ ಸಾಂಸ್ಕೃತಿಕ ಪರಿಸರ |
|---|---|---|---|---|
| 1. | ರಾಮದುರ್ಗ | ಬೈಲಹೊಂಗಲ | ಬೆಳಗಾಂವ | ಶಿ.ತಾ., ಬೃ.ಶಿ. |
| 2. | ಬಾದಾಮಿ | ಬಾದಾಮಿ | ಬಿಜಾಪುರ | ಹ.ಶಿ., ಸೂ.ಶಿ. ಶಿ.ತಾ. |
| 3. | ಕುಟಕನಕೇರಿ | – ,, – | – ,, – | – ,, – |
| 4. | ಹೊಸಮಹಾಕೂಟ | – ,, – | – ,, – | – ,, – |
| 5. | ಐಹೊಳೆ | ಹುನಗುಂದ | – ,, – | ಬೃಶಿ. ಆ.ಇ. |
| 6. | ನೀರಗುಂದ | ಮುಂಡರಗಿ | ಧಾರವಾಡ | – ,, – |
| 7. | ಕೊಪ್ಪಳ | ಕೊಪ್ಪಳ | ರಾಯಚೂರು | ಶಿ.ತಾ., ಬೃ.ಶಿ. ಆ.ಇ. |
| 8. | ಬಿಳೆಭಾವಿ | ಗಂಗಾವತಿ | – ,, – | ಬೃ.ಶಿ |
| 9. | ಹಿರೆಬೆನಕಲ್ | – ,, – | – ,, – | ಶಿ.ತಾ., ಬೃಶಿ. |
| 10. | ಇಂದುರ್ಗಿ | – ,, – | – ,, – | ಆ.ಇ., ಬೂ.ಗು. |
| 11. | ಮಲ್ಲಾಪುರ | – ,, – | – ,, – | ಬೃಶಿ. |
| 12. | ಆನೆಗೊಂದಿ | – ,, – | – ,, – | ಬೃ.ಶಿ., ಆ.ಇ. |
| 13. | ಅಂಜನಹಳ್ಳಿ | – ,, – | – ,, – | ಶಿ.ತಾ. |
| 14. | ತಿಮ್ಮಲಾಪುರ | – ,, – | – ,, – | – ,, – |
| 15. | ನಾರಾಯಣಪುರ | – ,, – | – ,, – | – ,, – |
| 16. | ಬಂಡಿ ಹರ್ಲಾಪುರ | – ,, – | – ,, – | ಶಿ.ತಾ. |
| 17. | ಚಿಕ್ಕರಾಮಪುರ | – ,, – | – ,, – | ಶಿ.ತಾ., ಬೃ.ಶಿ. |
| 18. | ವೆಂಕಟಾಪುರ | – ,, – | – ,, – | ಬೂ.ಗು., –,,– |

| ಸ್ಥಳ | ತಾಲ್ಲೂಕು | ಜಿಲ್ಲೆ | ಪ್ರಾಚೀನ ಸಾಂಸ್ಕೃತಿಕ ಪರಿಸರ |
|---|---|---|---|
| 19. ಪಿಕ್ಕಿಹಾಳ | ಲಿಂಗಸೂಗೂರು | ರಾಯಚೂರು | ಶಿ.ತಾ. ಬೃ.ಶಿ., ಆ.ಇ. ಬೂ.ಗು |
| 20. ಮಾಸ್ಕಿ | ಮಾಸ್ಕಿ | – ,, – | ಮ.ಇ. |
| 21. ಬೈಲ್ ಮರ್ಚೇಡ್ | – ,, – | – ,, – | – ,, – |
| 22. ಸಿರಿವಾರ | ರಾಯಚೂರು | – ,, – | ಮ.ಇ. |
| 23. ಆತನೂರು (ತೊಗಲಗುಡ್ಡ) | – ,, – | – ,, – | ಶಿ.ತಾ. |
| 24. ಬಲಚಕ್ರ | ಯಾದಗಿರಿ | ಗುಲ್ಬರ್ಗಾ | – ,, – |
| 25. ತೆಕ್ಕಲಕೋಟೆ | ಶಿರಗುಪ್ಪ | ಬಳ್ಳಾರಿ | – ,, – ಶಿ.ತಾ. |
| 26. ಹಂಪಿ | ಹೊಸಪೇಟೆ | – ,, – | ಶಿ.ತಾ., ಬೃ.ಶಿ. ಆ.ಇ. ಮ.ಇ. ಬೂ.ಗು |
| 27. | ಹರಪನಹಳ್ಳಿ | – ,, – | – ,, – |
| 28. ಸಂಗನಕಲ್ | ಬಳ್ಳಾರಿ | – ,, – | – ,, – |
| 29. ಕುರುಗೋಡು | ಬಳ್ಳಾರಿ | – ,, – | ಶಿ.ತಾ. ಬೃ.ಶಿ |
| 30. ಚಿತ್ರದುರ್ಗ | ಚಿತ್ರದುರ್ಗ | ಚಿತ್ರದುರ್ಗ | – ,, – |

2. ಕುಟ್ಟು: ಗೀರು ಚಿತ್ರಗಳು:

| | | | |
|---|---|---|---|
| 31. ಉಸ್‌ಗಾಲಿಮೋಲ್ | ಸಾಂಗೆ | ಗೋವಾ | ಶಿ.ತಾ., ಬೃ.ಶಿ. |
| 32. ಕಜೂರು | – ,, – | – ,, – | – ,, – |
| 33. ಬೋಳೆ | ಅಂಕೋಲ | ಉತ್ತರ ಕನ್ನಡ | – ,, – |
| 34. ಗಾವಳಿ | ಕುಂದಾಪುರ | ದಕ್ಷಿಣ ಕನ್ನಡ | ಬೃ.ಶಿ. ಆ.ಇ. |
| 35. ಬಸರೂರು | – ,, – | – ,, – | – ,, – |
| 36. ಹೊಳಲೂರು | ಶಿವಮೊಗ್ಗ | ಶಿವಮೊಗ್ಗ | ಶಿ.ತಾ. ಬೃ.ಶಿ. ಆ.ಇ. |
| 37. ಕುಳ್ಳೊಳ್ಳಿ | ಜಮಖಂಡಿ | ಬಿಜಾಪುರ | ಶಿ.ತಾ. ಬೃ.ಶಿ. |
| 38. ನವಿಲುತೀರ್ಥ | ಸೌಂದತ್ತಿ | ಬೆಳಗಾಂವ | ಬೃ.ಶಿ. |
| 39. ಗುಡ್ಡಾಪುರ | ಸಿರ್ಸಿ | ಉತ್ತರ ಕನ್ನಡ | ಆ.ಇ. ಮ.ಇ. |
| 40. ಚಿತ್ರದುರ್ಗ | ಚಿತ್ರದುರ್ಗ | ಚಿತ್ರದುರ್ಗ | ಶಿ.ತಾ. ಬೃ.ಶಿ. ಆ.ಇ. ಮ.ಇ. |
| 41. ಚಂದ್ರವಳ್ಳಿ | – ,, – | – ,, – | – ,, – |

| ಸ್ಥಳ | ತಾಲ್ಲೂಕು | ಜಿಲ್ಲೆ | ಪ್ರಾಚೀನ ಸಾಂಸ್ಕೃತಿಕ ಪರಿಸಂ |
|---|---|---|---|
| 42. ಜಟ್ಟಿಂಗ ರಾಮೇಶ್ವರ | ಮೊಳಕಾಲ್ಮೂರು | ಚಿತ್ರದುರ್ಗ | ಶಿ.ತಾ.,ಬೃ.ಶಿ.,ಆ.ಇ.,ಮ.ಇ. |
| 43. ಬ್ರಹ್ಮಗಿರಿ | – ,, – | – ,, – | – ,, – |
| 44. ಅಪ್ಪಯ್ಯನಹಳ್ಳಿ | | ಬಳ್ಳಾರಿ | – ,, – |
| 45. ಕುಪ್ಪಗಲ್ | ಬಳ್ಳಾರಿ | – ,, – | – ,, – |
| 46. ಸಂಗನಕಲ್ | – ,, – | – ,, – | – ,, – |
| 47. ಕುರುಗೋಡು | – ,, – | – ,, – | – ,, – |
| 48. ಹಳಕುಂಡಿ | ಹೊಸಪೇಟೆ | – ,, – | ಶಿ.ತಾ., ಬೃ.ಶಿ. |
| 49. ಬೆಳಗಲ್ | – ,, – | – ,, – | – ,, – |
| 50. ರಾಜಾಪುರ | ಸೊಂಡೂರು | – ,, – | – ,, – |
| 51. ಬೈರನಾಯಕನಹಳ್ಳಿ | – ,, – | – ,, – | – ,, – |
| 52. ಮಸ್ಕಿ | ಲಿಂಗಸುಗೂರು | ರಾಯಚೂರು | ಶಿ.ತಾ.,ಬೃ.ಶಿ.,ಆ.ಇ.,ಮ.ಇ. |
| 53. ಪಿಕ್ಕಿಹಾಳ | – ,, – | – ,, – | – ,, – |
| 54. ತಾವರಗೇರ | – ,, – | – ,, – | – ,, – |
| 55. ಭಿಲ್ಲಮ ರಾಯನಗುಡ್ಡ | – ,, – | – ,, – | – ,, – |
| 56. ಕಲ್ಲೂರು | ರಾಯಚೂರು | – ,, – | – ,, – |
| 57. ಕೊಪ್ಪಳ | ಕೊಪ್ಪಳ | – ,, – | – ,, – |
| 58. ಉಸ್‌ಗಾಲೀಮೋಲ್ | ಸಾಂಗೆ | ಗೋವಾ | – ,, – |
| 59. ಕಜೂರು | – ,, – | – ,, – | – ,, – |

# ಆಧಾರ ಗ್ರಂಥಗಳು


1. ಅರ್ಚಿಬಾಲ್ಡ್ ಕಾರ್ಲೈಲ್: 'ಕೇವ್ ಪೈಂಟಿಂಗ್ಸ್ ಆಫ್ ದಿ ಕೈಮೂರ್ ರೇಂಜ್', ಜರ್ನಲ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್, 1899.

2. ಏಂಜೆಲೊ ಫೊಸತಿ ಮತ್ತು ಇತರರು: ರೂಪಸ್ತ್ರಿಯನ್ ಆರ್ಕಿಯಾಲಜಿ, ವಲ್ ಕಮೋನಿಕ (ಇಟಲಿ), 1990.

3. ಜಾನ್ ಕಾಕ್‌ಬರ್ನ್: 'ಕೇವ್ ಡ್ರಾಯಿಂಗ್ಸ್ ಇನ್ ದಿ ಕೈಮೂರ್ ರೇಂಜ್', ಜರ್ನಲ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್, ಸಂಚಿಕೆ 96, 1899.

4. ಮಟಪಾಲ್. ವೈ: "ರಾಕ್ ಪೈಂಟಿಂಗ್ಸ್ ಇನ್ ಭೀಂಬೆಟ್ಕಾ ಆ್ಯಂಡ್ ಕರ್ನಾಟಕ : ಥೀಮ್, ಸ್ಟೈಲ್ ಆ್ಯಂಡ್ ಟೆಕ್ನಿಕ್", ಆರ್ಕಿಯಾಲಜಿ ಇನ್ ಕರ್ನಾಟಕ, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಕರ್ನಾಟಕ ಸರ್ಕಾರ, ಮೈಸೂರು, 1990 (ಪ್ರಾ.ಸಂ.ಇ.).

5. ಮಾರ್ಷಲ್. ಜೆ: ಮೊಹೆಂಜೊದಾರೊ ಆ್ಯಂಡ್ ಇಂಡಸ್ ಸಿವಿಲೆಜೇಷನ್, ಲಂಡನ್, 1931.

6. ಮಿಚೆಲ್ ಲೋರ್‌ಬ್ಲನ್‌ಶೆಟ್: ರಾಕ್ ಆರ್ಟ್ ಇನ್ ದಿ ಓಲ್ಡ್ ವರ್ಲ್ಡ್, ಇಂದಿರಾಗಾಂಧಿ ನ್ಯಾಷನಲ್ ಸೆಂಟರ್ ಫಾರ್ ದಿ ಆರ್ಟ್ಸ್, ದೆಹಲಿ, 1992.

7. ಬಿಬ್ಬಿ ಜೆಫರಿ: ಫೋರ್ ಥೌಸಂಡ್ ಇಯರ್ಸ್ ಎಗೋ, ಲಂಡನ್ ಮತ್ತು ಗ್ಲ್ಯಾಸ್ಗೊ, 1962.

8. ಪೊವೆಲ್. ಟಿ.ಜಿ. ಇ: ಪ್ರಿ–ಹಿಸ್ಟಾರಿಕ್ ಆರ್ಟ್, ನ್ಯೂಯಾರ್ಕ್, 1966.

9. ವಿಷ್ಣು. ಎಸ್. ವಾಕಣಕರ್ ಮತ್ತು ರಾಬರ್ಟ್ ಆರ್. ಆರ್. ಬ್ರೂಕ್ಸ್: ಸ್ಟೋನ್ ಏಜ್ ಪೈಂಟಿಂಗ್ಸ್ ಇನ್ ಇಂಡಿಯಾ, ಮುಂಬಯಿ 1976.

10. ಇರ್ವಿನ್ ನ್ಯೂ ಮೇಯರ್: ಪ್ರಿ–ಹಿಸ್ಟಾರಿಕ್ ಇಂಡಿಯನ್ ರಾಕ್ ಪೈಂಟಿಂಗ್ಸ್, 1983 ಮತ್ತು ಲೈನ್ಸ್ ಆನ್ ಸ್ಟೋನ್, 1994

11. ಇಂಡಿಯನ್ ಆರ್ಕಿಯಾಲಜಿ : ಎ ರಿವ್ಯೂ (ಪುರಾತತ್ವ ಸರ್ವೇಕ್ಷಣ ಶಾಖೆ, ಕೇಂದ್ರ ಸರ್ಕಾರ ವಾರ್ಷಿಕ ವರದಿ) : 1961–62ರಿಂದ 1979–80ರ ವರೆಗಿನ ವಾರ್ಷಿಕ ವರದಿಗಳ 'ಎಕ್ಸ್‌ಪ್ಲೋರೇಶನ್ಸ್: ಕರ್ನಾಟಕ' ಎಂಬ ಭಾಗದಲ್ಲಿ ನಾನು ಶೋಧಿಸಿದ ಗವಿ ವರ್ಣ ಮತ್ತು ಬಯಲು ಬಂಡೆಚಿತ್ರಗಳ ಬಗೆಗೆ ವರದಿಯಾಗಿದೆ.

12. ಸುಂದರ. ಅ: 'ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಚಿತ್ರಗಳು', ಸವಿ ಸಂಚಯ (ಶ್ರೀ ಸದಾಶಿವ ಒಡೆಯರರ ವರ್ಧಂತ್ಯುತ್ಸವ ಸಂಸ್ಮರಣ ಗ್ರಂಥ), ಚೌಡಯ್ಯ ದಾನಪುರ, 1974.

13. ಸುಂದರ. ಅ: ಫರ್ದರ್ ನೋಟೀಸಸ್ ಆಫ್ ರಾಕ್ ಪೈಂಟಿಂಗ್ಸ್ ಇನ್ ಹಿರೆಬೆನಕಲ್', ಜರ್ನಲ್ ಆಫ್ ಇಂಡಿಯನ್ ಹಿಸ್ಟ್ರಿ, ಸಂಪುಟ 52, ಭಾಗ–1, ತಿರುವನಂತಪುರ, 1974.

14. ಸುಂದರ, ಅ: 'ಇತ್ತೀಚಿನ ಕೆಲವು ಮುಖ್ಯ ಪುರಾತತ್ವ ಶೋಧನೆಗಳು', ಕರ್ನಾಟಕ ಭಾರತಿ, ಸಂಪುಟ 8, ಸಂಚಿಕೆ 2, ಧಾರವಾಡ, 1975.

15. ಸುಂದರ. ಅ: ''ಸಮ್ ಆರ್ಕಿಯಾಲಾಜಿಕಲ್ ಡಿಸ್ಕವರಿಸ್ ಇನ್ ನಾರ್ತ್ ಕರ್ನಾಟಕ, ಸಿಲ್ವರ್ ಜುಬಿಲಿ ಸೊವೆನೀರ್ ಆಫ್ ಜನತಾ ಶಿಕ್ಷಣ ಸಮಿತಿ, ಧಾರವಾಡ, 1976.

16. ಸುಂದರ. ಅ: 'ಎ ರೇರ್ ಪ್ರಿ ಹಿಸ್ಟಾರಿಕ್ ಪೈಂಟಿಂಗ್ ಇನ್ ಬಾದಾಮಿ', ಆಲ್ ಇಂಡಿಯಾ ಓರಿಯಂಟಲ್ ಕಾನ್‌ಫರೆನ್ಸ್, 28ನೇ ಅಧಿವೇಶನ, (ಸಮರಿಸ್ ಆಫ್ ಪೇಪರ್ಸ್), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1976.

17. ಸುಂದರ. ಅ: 'ಕೆಲವು ಈಚಿನ ಗಮನಾರ್ಹ ಪುರಾತತ್ವ ಶೋಧನೆಗಳು', ಕರ್ನಾಟಕ ಭಾರತಿ, ಸಂಪುಟ 9, ಸಂಚಿಕೆ 4, ಧಾರವಾಡ, 1977.

18. ಸುಂದರ. ಅ: 'ಪ್ರಿ ಹಿಸ್ಟಾಂಕ್ ಆರ್ಟ್ ಇನ್ ಕರ್ನಾಟಕ', ಆರ್ಕಿಯಾಲಜಿ ಆಫ್ ಕರ್ನಾಟಕ, ಮೈಸೂರು, 1978.

19. ಸುಂದರ. ಅ: ದಿ 'ಚಿತ್ರದುರ್ಗ ಪರಿಸರ : ಇತ್ತೀಚಿನ ಪುರಾತತ್ವ ಶೋಧನೆಗಳು', ಮಾನವಿಕ ಭಾರತಿ, ಸಂಪುಟ 2, ಸಂಚಿಕೆ 1, ಧಾರವಾಡ, 1978.

20. ಸುಂದರ. ಅ: 'ಉತ್ತರ ಕರ್ನಾಟಕದಲ್ಲಿ ಬಂಡೆಗಲ್ಲಿನ ವರ್ಣಚಿತ್ರಗಳು', ಬೆಳ್ವೊಲ (ಡಾ. ಆರ್. ಸಿ. ಹಿರೇಮಠ ಅವರ ಅಭಿನಂದನ ಗ್ರಂಥ), ಧಾರವಾಡ, 1981.

21. ಸುಂದರ. ಅ: "ರಾಕ್ ಬ್ರೂಯಿಸಿಂಗ್ಸ್ ಇನ್ ನಾರ್ತ್ ಕರ್ನಾಟಕ ವಿಥ್ ಪರ್ಟಿಕ್ಯುಲರ್ ರೆಫರೆನ್ಸ್ ಟು ಭಿಲ್ಲಮರಾಯನ ಗುಡ್ಡ", ಸ್ಟಡೀಸ್ ಇನ್ ಕರ್ನಾಟಕ, ಹಿಸ್ಟರಿ ಆ್ಯಂಡ್ ಕಲ್ಚರ್, ಪ್ರೊಸಿಡಿಂಗ್ಸ್ ಆಫ್ ಕರ್ನಾಟಕ ಹಿಸ್ಟರಿ ಕಾಂಗ್ರೆಸ್, ಸಂ. 1, ಬೆಂಗಳೂರು, 1985.

22. ಸುಂದರ. ಅ: 'ಎ ನ್ಯೂಲಿ ಡಿಸ್ಕವರ್ಡ್ ಮೆಗಲಿಥಿಕ್ ಎನ್‌ಗ್ರೇವಿಂಗ್, ಇನ್ ಕರ್ನಾಟಕ' ರಿಸೆಂಟ್ ಅಡ್ವಾನ್ಸಸ್ ಇನ್ ಇಂಡೋ–ಪ್ಯಾಸಿಫಿಕ್ ಪ್ರಿ–ಹಿಸ್ಟರಿ, ದೆಹಲಿ, 1985

23. ಸುಂದರ. ಅ: 'ರಾಕ್ ಪೈಂಟಿಂಗ್ಸ್ ಇನ್ ಹಂಪಿ ಸಮ್ ಆಸ್ಪೆಕ್ಟ್ಸ್', ಆರ್ಕಿಯಾಲಜಿ ಇನ್ ಕರ್ನಾಟಕ, ಪ್ರಾ.ಸಂ.ಇ.'

24. ಲೋಫರ್ ವಾಂಕೆ: ಜೆಂತ್ರಲಿಂದಿಬ್ ಫೆಲ್ಸ್‌ಬಿಲ್ದರ್, ಅಕಾಡೆಮಿಬ್ ದ್ರಕ್ ವರ್ಲಗ್ ಸಾನ್‌ಸ್ತಾಲ್ತ್, ಗ್ರಾಜ್ (ಆಸ್ಟ್ರಿಯಾ), 1977.

25. ವಸಂತಶೆಟ್ಟಿ : 'ಪ್ರಿ ಹಿಸ್ಟಾರಿಕ್ ರಾಕ್ ಬ್ರೂಯಿಸಿಂಗ್ಸ್ ಫ್ರಮ್ ದಕ್ಷಿಣಕನ್ನಡ', ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ, ಸಂಪುಟ 74, ಭಾಗ 1, ಬೆಂಗಳೂರು, 1983.

26. ಶ್ರೀಶೈಲ ಆರಾಧ್ಯ. ಎಚ್: ಸಂಶೋಧನೆಯ ಹಾದಿಯಲ್ಲಿ, ಚಿತ್ರದುರ್ಗ, 1983.

27. ಷಡಕ್ಷರಯ್ಯ. ಆರ್. ಎಂ. : 'ರಾಕ್ ಪೈಂಟಿಂಗ್ಸ್ ಇನ್ ಮಲ್ಲಾಪುರ ಗಂಗಾವತಿ ತಾಲ್ಲೂಕು ರಾಯಚೂರು ಜಿಲ್ಲೆ', ಆರ್ಕಿಯಾಲಜಿ ಇನ್ ಕರ್ನಾಟಕ, (ಪ್ರಾ.ಸಂ.ಇ.).





ಚಿತ್ರ 1: ಕುಟಕನ ಕೇರಿ: ವಿವಿಧ ಶೈಲಿಗಳ ಮನುಷ್ಯ ಚಿತ್ರಗಳು (ಸೂಕ್ಷ್ಮ ಶಿಲಾಯುಗ)





ಚಿತ್ರ 2 ೧. ಹಿರೆಬೆನಕಲ್

೨. ವೆಂಕಟಾಪುರ : ಸಾಲುಕುಣಿತ ಎರಡು ಪ್ರಕಾರದವು

(ಶಿಲಾ–ತಾಮ್ರಯುಗ–ಬೃಹತ್ ಶಿಲಾ ಸಂಸ್ಕೃತಿ ಯುಗ)





ಚಿತ್ರ 3: ೧. ಮಲ್ಲಾಪುರ ಮತ್ತು ೨. ಹಿರೆಬೆನಕಲ್: ಧಾರ್ಮಿಕ ಕಟ್ಟಳೆ ಕುಣಿತ (ಚಿತ್ರ ೧. ಕೃಪೆ: ಇ.ಒ. ತಿಲ್ನರ್, ಗ್ರಾಜ್).





ಚಿತ್ರ 4 ಮಲ್ಲಾಪುರ: ೧. ಸ್ತ್ರೀ–ಪುರುಷ ನೃತ್ಯ (ಶಿಲಾ–ತಾಮ್ರಯುಗ–ಬೃಹತ್ ಶಿಲಾ ಸಂಸ್ಕೃತಿ ಯುಗ)



ಚಿತ್ರ 5: ಹಂಪಿ: 'ಬರಮ ದೇವರ' ಗುಂಡಿನ ಮೇಲಿರುವ ಸಮೂಹ ಕುಣಿತ ವರ್ಣಚಿತ್ರಗಳು.
(ಬೃಹತ್ ಶಿಲಾ ಸಂಸ್ಕೃತಿಯ ಆದಿಕಾಲ)



ಚಿತ್ರ 6: ಚಿಕ್ಕರಾಮಪುರ: ಬೃಹತ್ ಶಿಲಾ ವೃತ್ತ ಗೋರಿಯ ಅರ್ಥಪೂರ್ಣ ಚಿತ್ರ



ಚಿತ್ರ 7: ೧, ೨ ಬಾದಾಮಿ: ಸೂಕ್ಷ್ಮ ಶಿಲಾಯುಗ (ಪೂರ್ವದ?) ವಿಚಿತ್ರ ಚಿತ್ರಗಳು



ಚಿತ್ರ 8: ೧, ೨ ಕುಟಕನಕೇರಿ: ಪ್ರಾಣಿಗಳು (ಸೂಕ್ಷ್ಮ ಶಿಲಾಯುಗ)





ಚಿತ್ರ ೯: ೧. ಕುಟಕನಕೇರಿ: ಮನುಷ್ಯ(?) ಸೂಕ್ಷ್ಮ ಶಿಲಾಯುಗ ೨. ಐಹೊಳೆ: ಚಿರತೆ(?) ಸೂಕ್ಷ್ಮ ಶಿಲಾಯುಗ





ಚಿತ್ರ 10: ೧, ೨ ಮಲ್ಲಾಪುರ: ವಿವಿಧ ಶೈಲಿಗಳ ಗೂಳಿ ವರ್ಣಚಿತ್ರಗಳು
ಶಿಲಾ–ತಾಮ್ರ–ಬೃಹತ್ ಶಿಲಾಯುಗ ಸಂಸ್ಕೃತಿ ಕಾಲ



ಚಿತ್ರ 11: ೧. ಹಿರೆಬೆನಕಲ್ ಮತ್ತು ೨. ಚಿಕ್ಕರಾಮಪುರ: ಜಿಂಕೆ ಸಾಲಿನ ಗೂಳಿಗಳ ವರ್ಣಚಿತ್ರಗಳು

(ಶಿಲಾ–ತಾಮ್ರ–ಬೃಹತ್ ಶಿಲಾಯುಗ)





ಚಿತ್ರ 12: ಕುರಗೋಡು: ೧. ಜೋಡಿ ಜಿಂಕೆ ೨. ಗಬ್ಬದ ಜಿಂಕೆ (ಶಿಲಾ–ತಾಮ್ರಯುಗ)



ಚಿತ್ರ 13: ಕುರುಗೋಡು: ಶಿಲಾ–ತಾಮ್ರ ಯುಗದ (೧) ಹಾಗೂ ಅನಂತರ ಕಾಲದ (೨) ಹುಲಿ ಚಿತ್ರಗಳು





ಚಿತ್ರ 14: ಕುರುಗೋಡು: ಶಿಲಾ ತಾಮ್ರ ಯುಗ ಹಾಗೂ ಅನಂತರ ಕಾಲದ ಪ್ರಾಣಿಗಳು





ಚಿತ್ರ 15: ೧. ಕುರುಗೋಡು: ಚಿರತೆ(?) (ಶಿಲಾ ತಾಮ್ರ–ಬೃಹತ್ ಶಿಲಾಯುಗ)

೨. ಆನೆಗೊಂದಿ: (ಪಕ್ಷಿ ಬೃಹತ್ ಶಿಲಾಯುಗ)



ಚಿತ್ರ 16: ಆನೆಗೊಂದಿ: ದೋಣಿಯಾಕಾರದ ಬಂಡೆಯ ಮೇಲೆ ದೋಣಿ ಚಿತ್ರ. ಮೇಲ ಒಂದು ಪಕ್ಷಿ. (ಶಿಲಾ ತಾಮ್ರ–ಬೃಹತ್ ಶಿಲಾಯುಗ)





ಚಿತ್ರ 17: ೧. ಆತನೂರು: ಬಾಣದಿಂದ ಚುಚ್ಚಲ್ಪಟ್ಟ ಜಿಂಕೆ (ಶಿಲಾ ತಾಮ್ರ ಯುಗ–ಬೃಹತ್ ಶಿಲಾಯುಗ)

೨. ಮಲ್ಲಾಪುರ: ಉದ್ದ ಕತ್ತಿನ ಎತ್ತರ ಪ್ರಾಣಿ (ಬೃಹತ್ ಶಿಲಾಯುಗ)





ಚಿತ್ರ 18: ಕುರುಗೋಡು: ೧ ಆನೆ ಸಮೂಹ ೨. ಒಂದು ಜಾತಿ ಬಳ್ಳಿ (ಬೃಹತ್ ಶಿಲಾಯುಗ–



ಚಿತ್ರ 19: ಐಹೊಳೆ : ಬೃಹತ್ ಶಿಲಾ ಸಂಸ್ಕೃತಿ (ಅಥವಾ ಪೂರ್ವದ?) ಕಾಲದ ಸಾಂಕೇತಿಕ ರೇಖಾ ಚಿತ್ರ



ಬಿಳೆಭಾವಿ: ಸೂರ್ಯ (ಬೃಹತ್ ಶಿಲಾಯುಗ)





ಚಿತ್ರ 20: ೧. ಬಾದಾಮಿ ಹತ್ತಿರ ಶಿಡ್ಲ ಫಡಿಯಲ್ಲಿ ಬಿಳಿ ಬಣ್ಣದ ಪಕ್ಷಿ, ಹಾವು ಚಿತ್ರಗಳು (ಅನಿಶ್ಚಿ
ಕಾಲಮಾನ)

೨. ಹಿರೇಬೆನಕಲ್ ಬೆಟ್ಟದ ಗುಹಾಶ್ರಯ: ಅಂಕುಡೊಂಕಿನ ರೇಖಾಚಿತ್ರ (ಸೂಕ್ಷ್ಮ ಶಿಲಾಯುಗ)



ಚಿತ್ರ 22: ಬಾದಾಮಿ: ಬಾದಾಮಿ ಚಾಲುಕ್ಯ ಕಾಲದ ಶಿಷ್ಟ ಸಂಪ್ರದಾಯದ ಸುಂದರ ವರ್ಣಚಿತ್ರಗಳು





ಚಿತ್ರ 23: ೧. ಚಿಕ್ಕರಾಮಪುರ: ಬೃಹತ್ ಶಿಲಾ ಸಂಸ್ಕೃತಿ–ಆದಿ ಇತಿಹಾಸ ಕಾಲದ ಗೋಗ್ರಹಣ (?) ಚಿತ್ರ.

೨. ಬೈಲ್ ಮರ್ಚೇಡ್: ಮಧ್ಯಯುಗೀನ ಕಾಲದ "ಗೋಗ್ರಹಣ" ಚಿತ್ರ





ಚಿತ್ರ 24: ೧. ಬೈಲ್ ಮರ್ಚೇಡ್: ಮಧ್ಯಯುಗೀನ ಕಾಲದ "ಗೋಗ್ರಹಣ"

೨. ಖಟಕನ ಕೇರಿ: ಯುದ್ಧದ ಸೈನಿಕರು (ಇತಿಹಾಸ ಕಾಲ)





ಚಿತ್ರ 25: ೧, ೨ ಬಲಚಕ್ರ: ವಿವಿಧ ಪ್ರಕಾರಗಳ ಮನುಷ್ಯ ಚಿತ್ರಗಳು (ಬಾದಾಮಿ ಚಾಲುಕ್ಯ ಪೂರ್ವಕಾಲ)





ಚಿತ್ರ 26: ೧, ೨ ಬಲಚಕ್ರ: ವಿವಿಧ ಪ್ರಕಾರಗಳ ಮನುಷ್ಯ ಚಿತ್ರಗಳು (ಬಾದಾಮಿ ಚಾಲುಕ್ಯ ಪೂರ್ವ—ಅನಂತರ ಕಾಲ)





ಚಿತ್ರ 27: ೧, ೨ ಬಲಚಕ್ರ: ವಿವಿಧ ಪ್ರಕಾರಗಳ ಮನುಷ್ಯ ಚಿತ್ರಗಳು (ಇತಿಹಾಸ ಕಾಲ)





ಚಿತ್ರ 28: ೧, ೨ ಬಲಚಕ್ರ: ವಿವಿಧ ಪ್ರಕಾರಗಳ ಮನುಷ್ಯ ಚಿತ್ರಗಳು (ಬಾದಾಮಿ ಚಾಲುಕ್ಯ ಹಾಗೂ ಅನಂತರ ಕಾಲ)





ಚಿತ್ರ 29: ಬಲಚಕ್ರ: ನಾಲ್ಕನೇ ಪ್ರಕಾರದ ಮನುಷ್ಯ ಚಿತ್ರಗಳು (ಬಾದಾಮಿ ಚಾಲುಕ್ಯ ಅನಂತರ ಕಾಲ)





ಚಿತ್ರ 31: ೧, ೨ ಬಲಚಕ್ರ: ಮನುಷ್ಯ ಪ್ರಾಣಿ–ರೇಖಾ ಚಿತ್ರಗಳು ಬಾದಾಮಿ ಚಾಲುಕ್ಯ ಪೂರ್ವ
ಹಾಗೂ ಅನಂತರ ಕಾಲ, ೨. ಶ್ರೀ ಉಗ್ರಮಿಟ್ಟ ಇಚ್ಚ?.





ಚಿತ್ರ 33: ೧, ೨ ಮಾನ್ವಿ: ವಿಜಯನಗರ ಕಾಲದ ಪೌರಾಣಿಕ ನಿರೂಪಣೆಯ ಚಿತ್ರಪಟ್ಟಿಕೆಗಳು.
ಕ್ರಿಸ್ತಶಕ ಪೂರ್ವದ ಬೌದ್ಧ ಜಾತಕಗಳ ಚಿತ್ರಪಟಗಳ ಸುರಳಿಯಂತಿವೆ.







ಚಿತ್ರ 34: ೧. ಬಿಳಿಭಾವಿ: ೨. ತಿಮ್ಮಲಾಪುರ ೩. ಬಂಡಿ ಹರ್ಲಾಪುರ (ಇತಿಹಾಸ ಹಾಗೂ ಸಮಕಾಲೀನ ಯುಗ)




ಚಿತ್ರ 35: ಸಿದ್ಧನಕಲ್: ಜಾಸ್ಪರ್ ಕಲ್ಲಿನ ಮೇಲಿನ ರೇಖಾಚಿತ್ರ (ಸೂಕ್ಷ್ಮ ಶಿಲಾಯುಗ? ಇಲ್ಲವೆ ಬೃಹತ್ ಶಿಲಾಯುಗ) (ಕೃಪೆ: ಡಾ. ಎಸ್. ವಿ. ಪಾಡಿಗಾರ್)





ಚಿತ್ರ 36: ೧, ೨ ಸಾಂಗೆ (ಉಸ್‌ಗಾಲಿಮೋಲ್ ತಾ.ಗೋವಾ): ಶಿಲಾತಾಮ್ರಯುಗ–ಆ
ಬೃಹತ್ ಶಿಲಾಯುಗ ಕಾಲದ ಪ್ರಾಣಿ ಚಿತ್ರಗಳು (ಕೃಪೆ: ಶ್ರೀ ಎಂ. ನಂಬಿರಾಜನ್)





ಚಿತ್ರ 37: ೧. ಹೊಳಲೂರು ೨. ಕಾಜೂರು (ಗೋವಾ) (ಶಿಲಾ–ತಾಮ್ರ–ಬೃಹತ್ ಶಿಲಾ ಸಂಸ್ಕೃತಿಯುಗ)





ಚಿತ್ರ 38: ೧, ೨ ಹೊಳಲೂರು: ತುಂಗಾನದಿ ಮಧ್ಯದಲ್ಲಿಯ ಬಂಡೆಯ ಮೇಲಿನ ಗೀರಿದ ಚಿತ್ರಗಳು (ಶಿಲಾ—ತಾಮ್ರಯುಗ—ಬೃಹತ್ ಶಿಲಾ ಸಂಸ್ಕೃತಿಯುಗ)





ಚಿತ್ರ 39: ೧, ೨ ಹಳಕುಂಡಿ: ವಿವಿಧ ಶೈಲಿಗಳ ಪ್ರಾಣಿ ಚಿತ್ರಗಳು ೨ನೇ ಚಿತ್ರದಲ್ಲಿ ಜಿಂಕೆ(?)ಯ ಬೆನ್ನಿನಲ್ಲಿ ನಾಟಿದ ಬಾಣವು ಗಮನಾರ್ಹ (ಶಿಲಾ–ತಾಮ್ರಯುಗ ಕಾಲ)





ಚಿತ್ರ 40: ೧, ೨ ಹಳಕುಂಡಿ: ೧ ಕುಟ್ಟು ಚಿತ್ರಗಳು ಶಿಲಾ–ತಾಮ್ರಯುಗ ೨. ಶಿಲಾ–ತಾಮ್ರಯುಗ ಚಿತ್ರಗಳ ಅನುಕರಣೆಯ ಸಮಕಾಲೀನ ಚಿತ್ರಗಳು.





ಚಿತ್ರ 41: ೧, ೨ ಕುಳ್ಳೊಳ್ಳಿ(ಜಮಖಂಡಿ ತಾ. ಬಿಜಾಪುರ ಜಿ.)

೨. ಭಿಲ್ಲಮರಾಯನಗುಡ್ಡ (೧. ಇತಿಹಾಸ ಕಾಲ? ೨. ಬೃಹತ್ ಶಿಲಾಯುಗ)





ಚಿತ್ರ 42: ೧. ಬೆಳಗಲ್ಲು: ೨. ಭಿಲ್ಲಮರಾಯನಗುಡ್ಡ ಗೂಳಿ ಚಿತ್ರಗಳು (ಶಿಲಾ–ತಾಮ್ರ–ಬೃಹತ್ ಶಿಲಾಯುಗ)





ಚಿತ್ರ 43: ೧. ಭಿಲ್ಲಮರಾಯನ ಗುಡ್ಡ : ೨. ಚಿತ್ರದುರ್ಗ ಗೂಳಿ ಚಿತ್ರಗಳು (ಶಿಲಾ–ತಾಮ್ರಯುಗ) ೨ನೇಯದರಲ್ಲಿ ಕೋಡುಗಳ ಆಕೃತಿ ಗಮನಾರ್ಹ





ಚಿತ್ರ 44: ೧. ಗೋವಾ : 'ಚಕ್ರವ್ಯೂಹ' ಚಿತ್ರ (ಅನಿಶ್ಚಿತ ಕಾಲಮಾನ) (ಕೃಪೆ: ಶ್ರೀ ಎಂ. ನಂಬಿರಾಜನ್) ೨. ಗಾವಳಿ: ಜೋಡಿ ಗೂಳಿ ಮತ್ತು ಮಾಡಲ ಚಿತ್ರ (ಕೃಪೆ: ಡಾ. ವಸಂತ ಶೆಟ್ಟಿ





ಚಿತ್ರ 45: ೧. ಕಲ್ಲೂರು (ಎಮ್ಮಿಗುಡ್ಡ) ೨. ಚಿತ್ರದುರ್ಗ ಕುಟ್ಟಿದ ಮತ್ತು ಗೀರು ರೇಖಾಚಿತ್ರಗಳು (ಶಿಲಾ ತಾಮ್ರ–ಬೃಹತ್ ಶಿಲಾಯುಗ ಸಂಸ್ಕೃತಿ ಕಾಲ)





ಚಿತ್ರ 46: ೧, ೨ ಬೋಳೆ ಹಾವು, ಜಿಂಕೆ(?), ಜೋಡಿ ಗೂಳಿ ಚಿತ್ರಗಳು (ಬೃಹತ್ ಶಿಲಾಯುಗ ಆದಿ ಹಂತ)





ಚಿತ್ರ 47: ೧, ೨ ಬೋಳೆ: ಮೀನು, ದೋಣಿ ಹುಟ್ಟು(?) ಚಿತ್ರಗಳು (ಆದಿ ಬೃಹತ್ ಶಿಲಾ ಯುಗ)



ಚಿತ್ರ 48: ೧. ಭಿಲ್ಲಮರಾಯನಗುಡ್ಡ: ಕುಟ್ಟಿದ ಹಾಗೂ ಗೀರಿದ ಹುಲಿ ಚಿತ್ರ (ಇತಿಹಾಸ ಕಾಲ?)

೨. ಬ್ರಹ್ಮಗಿರಿ: ಆನೆ (ಬೃಹತ್ ಶಿಲಾಯುಗ ಆದಿ ಹಂತದ)





ಚಿತ್ರ 49: ೧, ೨ ಮಸ್ಕಿ: ಕುಟ್ಟು ಚಿತ್ರಗಳು (ಶಿಲಾ–ತಾಮ್ರಯುಗ)





ಚಿತ್ರ 50: ೧. ನವಿಲು ತೀರ್ಥ: ಆರುಗಂಟಿನ ದ್ವಿರೇಖಾ ಚಿತ್ರ (ಬೃಹತ್ ಶಿಲಾಯುಗ)

೨. ಗುಡ್ಡಾಪುರ: ನಾಲ್ಕು ಗಂಟಿನ ಏಕ ರೇಖಾ, ಚಕ್ರ ನಕ್ಷತ್ರ ಮೊದಲಾದ ಗೀರಿದ ರೇಖಾ ಚಿತ್ರಗಳ



ಚಿತ್ರ 51: ಗಾವಳಿ: ಗೂಳಿಯ ಕಾಲಿಗೆ ಸೇರಿಸಿದ ಮಂಡಲ ಚಿತ್ರ



ಚಿತ್ರ 52: ಚಿತ್ರದುರ್ಗ: ನಾಲ್ಕು ಗಂಟಿನ ಒಂದು ರೇಖೆಯ ಚಿತ್ರದ ಒಂದು ಬದಿಯಲ್ಲಿ ವೃತ್ತ ತಗ್ಗು ಮತ್ತೊಂದು ಬದಿಯಲ್ಲಿ ಹೆಜ್ಜೆ ಗುರುತುಗಳು (ಇತಿಹಾಸ ಕಾಲ) (ಕೃಪೆ: ಶ್ರೀಲಕ್ಷ್ಮಣ ತೆಲಗಾವಿಯವರು)



ಚಿತ್ರ 53: ಚಿತ್ರದುರ್ಗ: ಒಂದೇ ರೇಖೆಯ ನಾಲ್ಕುಗಂಟಿನ ಚಿತ್ರ ಒಂದು ಬದಿಯ ರೇಖೆಯಲ್ಲಿ ಒಡಕು ಚಿತ್ರವು ನಾಗಮಂಡಲದಂತಿದೆ. (ಇತಿಹಾಸ ಕಾಲ) (ಕೃಪೆ: ಶ್ರೀ ಲಕ್ಷ್ಮಣ ತೆಲಗಾವಿಯವರು)







ಚಿತ್ರ 54: ೧. ಹಳಕುಂಡಿ. ೨. ಕುರಗೋಡು ೩. ಹಳಕುಂಡಿ (ಸಮಕಾಲೀನ ಕುಟ್ಟು ಚಿತ್ರಗಳು)





ಚಿತ್ರ 55: ಹಳಕುಂಡಿ: ೧ ಮನುಷ್ಯ ೨. ಆಂಜನೇಯ (ಸಮಕಾಲೀನ)

# ನಕ್ಷೆ: ಭಾರತ: ಬಂಡೆ ಮತ್ತು ಗವಿ ವರ್ಣ ಚಿತ್ರಗಳಿರುವ ತಾಣಗಳು

ಉ

ಪಾಕಿಸ್ತಾನ
ಹರಪ್ಪಾ
ಮೊಹೆಂಜೋದಾರೊ
ಕರಾಚಿ
ಅರವಳಿ ಬೆಟ್ಟಗಳು
ದೆಹಲಿ
ಆಗ್ರಾ
ಕೋಟ
ಭೋಪಾಲ
ವಾರಣಾಸಿ
ಅಲ್ಮೋರಾ
ಟಿಬೆಟ್
ಬಾಂಗ್ಲಾ ದೇಶ
ಕಲಕತ್ತಾ
ಬರ್ಮಾ
ಮುಂಬಯಿ
ಹೈದರಾಬಾದ
ಬಳ್ಳಾರಿ
ಬೆಂಗಳೂರು
ಮದ್ರಾಸ
ನೀಲಗಿರಿ ಬೆಟ್ಟಗಳು
ಮಧುರೈ
ಕ್ಯಾಂಡಿ
ಕೊಲಂಬೊ
ಶ್ರೀ ಲಂಕಾ

1 ಚೀಲಸ್
2 ಲಡಕ್
3 ಅಟಕ್
4 ಆಲ್ಮೋರಾ ಚಮೋಲಿ
5 ಹತಸಲ್
6 ಇದರ್
7 ತರಸಂಗ್
8 ಚಮರ್ಡಿ
9 ಸಿಂಗನಪುರ ವ್ಯಾಸಕೋಲಿ ಜ್ಞಂಗಹಾಡ್
10 ವಿಕ್ರಮಖೋಲ್
11 ತಂತಿರಿಮಲಲ್
12 ಹೆನನಿಗಲ ಗಲ್ಗೆ
13 ದ್ರೋವಕ ಖಂಡೆ

ಮೇರೆಗಳು
ನಗರಗಳು
ಗವಿ ಬಂಡೆ ಚಿತ್ರಗಳಿರುವ ತಾಣಗಳು

500 ಕಿ.ಮಿ.




ನಕ್ಷೆ: ದಕ್ಷಿಣ ಭಾರತದಲ್ಲಿ ಗವಿ ವರ್ಣ ಮತ್ತು ಬಂಡೆ ಚಿತ್ರಗಳಿರುವ ನೆಲೆಗಳು.



ಚಿತ್ರ 58: ಅಲ್ತಮಿರ (ಸ್ಪೈನ್ ದೇಶ): ಕಾಡುಕೋಣ ವರ್ಣಚಿತ್ರ









ಚಿತ್ರ 59: ೧. ಸ್ಪೇನ್ (ಆಗ್ನೇಯ ಭಾಗ) ಸೂಕ್ಷ್ಮ ಶಿಲಾಯುಗದ ಜಿಂಕೆಗಳ ದೃಶ್ಯ, ೨. ಕುಲ್ಲಿ (ಬಲೂಚಿಸ್ಥಾನ): ಮೃತ್ಪಾತ್ರೆ ಮೇಲಿನ ಗೂಳಿ ಚಿತ್ರ (ಶಿಲಾ–ತಾಮ್ರ ಯುಗ) ೩. ದೋಲ್ನಿ ವೆಸ್ತೋನಿಸ್: ಅಂತ್ಯ ಹಳೆ ಶಿಲಾಯುಗದ ವಿನಸ್ ದೇವತೆಯಂಥ ಗೊಂಬೆ, ೪. ಸೆಮವೋಡ (ಬಲ್ಗೇರಿಯಾ ತೀರ ಪ್ರದೇಶ) ನೂತನ ಶಿಲಾಯುಗ (ಸು. ಕ್ರಿ.ಪೂ. 3500) ಗೊಂಬೆ.




ಲೋಹಂದ ಹಳ್ಳ (ಮಿರ್ಜಾಪುರ ಜಿ. ಉ.ಪ್ರ.):
ಮನುಷ್ಯಾಕೃತಿಯ ಅಸ್ಥಿಗೊಂಬೆ ? : (ಸು.ಕ್ರಿ.ಪೂ.
ಅಂತ್ಯ ಹಳೆ ಶಿಲಾಯುಗ.




ಚಂದ್ರಾವತಿ :( ಸಿರೋಹಿ ಜಿ. ರಾಜಸ್ಥಾನ)
ಚಾಲ್ಸಿಡೋಣಿ ಕಲ್ಲಿನ ಮೇಲಿನ ರೇಖಾಕೃತಿ
( ಸೂಕ್ಷ್ಮ ಶಿಲಾಯುಗ )




ತಾಟ್ಸೆ (ಮಹಾರಾಷ್ಟ್ರ) : ಅಸ್ಕಿಟ ಪಕ್ಷಿಯ ಮೊಟ್ಟೆ



ಅರೆಗುಡ್ಡ (ಪಟ್ಟದಕಲ್ ಹತ್ತಿರ) ವಿಶಿಷ್ಟಭಿನ್ನ ಶೈಲಿಯ ಮನುಷ್ಯ-ಪಶು

( ಸು. ಕ್ರಿ.ಪೂ. 5000 – 3000 )



ಬಾದಾಮಿ : ಸೂಕ್ಷ್ಮ ಶಿಲಾಯುಗದ (ಸು.ಕ್ರಿ.ಪೂ 5,000–3,000) ವಿವಿಧ ಪ್ರಕಾರಗಳ ಸ್ತ್ರೀ-ಪುರುಷರ ಪ್ರಾಣಿಗಳ ವರ್ಣ ಚಿತ್ರಗಳು.





೩೦ ಸೆಂ.ಮಿ. 

ಬಾದಾಮಿ ( ರಿಂರೇಗುಡ್ಡ )( ಸೂಕ್ಷ್ಮ ಶಿಲಾಯುಗ )



5 ═══ ಸೆಂ.ಮಿ.

ಬಾದಾಮಿ



ಹಿರೆಗುಡ್ಡ. (ಬಾದಾಮಿ): ಸೂಕ್ಷ್ಮ ಶಿಲಾಯುಗ, ಸು.ಕ್ರಿ.ಪೂ. 5000-30




ಬಾದಾಮಿ (ಹಿರೆಗುಡ್ಡ) ಸು.ಕ್ರಿ.ಪೂ.5000-300













ಬಾದಾಮಿ (ಹಿರೆಗುಡ್ಡ) ಮತ್ತು ಐಹೊಳೆ: ವರ್ಣ ಚಿತ್ರಗಳು.



20 ಸೆಂ.ಮಿ. 



20 ಸೆಂ.ಮಿ. 

ಸೆಂ.ಮಿ. 20 



ಬಾದಾಮಿ (ಹಿರೆಗುಡ್ಡ): ಪ್ರಾಣಿಗಳ ವರ್ಣ ಚಿತ್ರಗಳು



50 ಸೆಂ.ಮಿ.



10 ಸೆಂ.ಮಿ.



10 ಸೆಂ.ಮಿ.



ಸೆಂ.ಮಿ. 10

ಚಿತ್ರಶಾಳ : ಶಿಲಾತಾಮ್ರಯುಗ




10 ಸೆಂ.ಮೀ.



10 ಸೆಂ.ಮೀ.



ಚಿಕ್ಕಹಾಳ : ಪ್ರಾಣಿಗಳ ಸಾಲು ಶಿಲಾತಾಮ್ರಯುಗ.












ತೆಕ್ಕಲಕೋಟೆ

೨೦ ಸೆಂ.ಮಿ.





ಹಿರೆಬೆನಕಲ್ : ಬೃಹತ ಶಿಲಾ ಸಂಸ್ಕೃತ ಕಾಲದ




ಹಿರೆಬೆನಕಲ್ : ಬೃಹತ ಶಿಲಾಗೋಃಠ ನೆಲೆ, ಕ್ರಿ.ಪೂ. 800-500




ಚಿತ್ರ 74 ಹಿರೆಬೆನಕಲ್: 4ನೇ ಗವಿ ವರ್ಣಚಿತ್ರಗಳು



10 ಸೆಂ.ಮಿ.

ಬಾದಾಮಿ: (ಹಿರೆಗುಡ್ಡ) ಕುಟ್ಟಿದ ಎತ್ತಿನ ಗಾಡಿ



ಮಸ್ಕಿ: ಕುಟ್ಟಿದ ಗೂಳಿ ಚಿತ್ರಗಳು. (ಪೂ. ಕ್ರಿ.ಪೂ. 1700-1000 )



10 ಸೆಂ. ಮಿ.

ಕುಪ್ಪಗಲ್ಲು ಕೊರೆದ ರೇಖಾ ಚಿತ್ರ



1 ಸೆಂ. ಮಿ.

ಮಸ್ಕಿ: ಕುಟ್ಟಿದ ಗೂಳಿಗಳು







ಕುಪುಗಲ್ಲು: ಕುಟ್ಟಿದ ಚಿತ್ರಗಳು(ಸು.ಕ್ರಿ.ಪೂ.1200-800)





10 ಸೆಂ.ಮಿ.







50 ಸೆಂ.ಮಿ.

ಕುಪ್ಪಗಲ್ಲು : ಕುಟ್ಟಿದ ಆನೆ ಸವಾರರು ಮತ್ತು ಇಬ್ಬರು ವ್ಯಕ್ತಿಗಳು ಪಾನಿಯವನ್ನು ಸೇವಿಸುತ್ತಿರುವುದು




ಮಸ್ಕಿ : 1. ಥಾರ್ಮಿ ಕಟ್ಟಳೆಯ ಕತ್ತಿಯನ್ನು ಹಿಡಿದುಕೊಂಡ ಮನುಷ್ಯ ಮತ್ತು ಕತ್ತಿ.
2. ನವಿಲು ಮತ್ತು ಕತ್ತಿ. ಶಿಲಾ-ತಾಮ್ರಯುಗ. (ಸು.ಕ್ರಿ.ಪೂ.1700-1000 )






ಕುಪ್ಪುಗಲ್ಲು : ಕೊರೆದ ಮತ್ತು ಕುಟ್ಟಿದ ರೇಖಾ ಚಿತ್ರಗಳು.



ಚಿತ್ರ 83 ದೈಮಾಬಾದ್: ಶಿಲಾ–ತಾಮ್ರಯುಗ ನೆಲೆಯಲ್ಲಿ ದೊರೆತ ವರ್ಣಚಿತ್ರಿತ ಮಣ್ಣಿನ ದೊಡ್ಡ ಪಾತ್ರೆ

(ಕೃಪೆ: ಕೇಂದ್ರ ಸರ್ಕಾರದ ಪುರಾತತ್ವ ಸರ್ವೇಕ್ಷಣ ಇಲಾಖೆ)




ಕೃಷ್ಣಾನದಿ ಪ್ರದೇಶ (ಬೆಳಗಾಂವ-ಬಿಜಾಪುರ ಜಿ.) ವರ್ಣ ಚಿತ್ರತ
ಮೃತ್ ಪಾತ್ರೆಗಳ ಚೂರುಗಳು. (ಮಸ್ಕಿ ಮಾದರಿ)



ಚಿತ್ರ 85 ಕೃಷ್ಣಾನದಿ ಪ್ರದೇಶ (ಬೆಳಗಾಂವ–ಬಿಜಾಪುರ ಜಿ.) ವರ್ಣಚಿತ್ರಿತ ಮೃತ್ ಪಾತ್ರೆಗಳ ಚೂರುಗಳು



ಭೀಮಾ ನದಿ ಪ್ರದೇಶ (ಬಿಜಾಪುರ, ಜಿ.) : ಜೋರ್ವೆ

ಶಿಲಾ ತಾಮ್ರಯುಗ ಸಂಸ್ಕೃತಿಯ ಮಣ್ಣಿನ ಪಾತ್ರೆಯ ಮೇಲಿನ ವರ್ಣ ಚಿತ್ರಗಳು.




ರಳ್ಳೂರು : ಕಪ್ಪು-ಕೆಂಪು ದ್ವಿವರ್ಣ ಮೃತ ಪಾತ್ರೆಗಳ ಮೇಲಿನ ಬಿಳಿ
ರೇಖಾ ಚಿತ್ರಗಳು.



ಪಿಕ್ಲಿಹಾಳ : ಇತಿಹಾಸ ಆರಂಭ ಕಾಲದ ವರ್ಣ ಚಿತ್ರದ ಮಣ್ಣಿನ ಪಾತ್ರೆ












ಪಿಕ್ಲಿಹಾಳ : ಸುಟ್ಟ ಮಣ್ಣಿನ ಗೊಂಬೆಗಳು.